ಪ್ರಪಂಚಧರ್ಮ—ಮೊದಲನೆಯ ಭಾಗ

# ದಾಕ್ಷಾಯಿಣಿ.



ಗ್ರಂಥಕರ್ತರು,

**ನಾರಾಯಣ ವೆಂಕಟೇಶ ಕುರಡಿ.**

**ಬೆಲೆ ೮ ಆಣೆ.**

( **The book is sanctioned as a prize & library book** )

ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಯ

**ತೃತೀಯ ಪುಷ್ಪ**

ಸಚಿತ್ರ



ಪ್ರಪಂಚಧರ್ಮ-ಮೊದಲನೆಯ ಭಾಗ

# ದಾಕ್ಷಾಯಿಣಿ.

( ದ್ವಿತೀಯ ಮುದ್ರಣ )



ಇದನ್ನು

ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಯ ಸಂಪಾದಕರಾದ

**ನಾರಾಯಣ ವೆಂಕಟೇಶ ಕುರಡಿ**

ಇವರು ರಚಿಸಿದರು.



ಶ್ರೀಮಹಾವೀರ ಮುದ್ರಣಾಲಯ ಬೆಳಗಾವಿ.

**Price 0-8-0.** **ಬೆಲೆ ೮ ಆಣೆಗಳು.**

ಇದನ್ನು ಬೆಳಗಾವಿಯೊಳಗೆ ಮ. " **ದೇವೇಂದ್ರ ಫಡೆಪ್ಪಾ ಛೌಗುಲೆ**
ಇವರು ತಮ್ಮ " **ಶ್ರೀಮಹಾವೀರ** " ಮುದ್ರಣಾಲಯದಲ್ಲಿ ಮುದ್ರಿಸಿದರು.
ಮತ್ತು
ಮ. **ನಾರಾಯಣ ವೆಂಕಟೇಶ ಕುರಡಿ** ಇವರು ವಿಜಾಪುರದಲ್ಲಿ
" **ಶ್ರೀಸರಸ್ವತೀಮಂದಿರದಲ್ಲಿ** " ಪ್ರಕಟಿಸಿದರು.

# ಕರ್ನಾಟಕ ಹಿತೈಷಿಣೀ ಗ್ರಂಥಮಾಲೆ.

ಉದಾತ್ತವಾದ ನೈತಿಕತತ್ವಗಳನ್ನು ಸುಲಭವಾದ ಐತಿಹಾಸಿಕ ಹಾಗು ಪೌರಾಣಿಕ ಕಥೆಗಳ ರೂಪದಿಂದ ಬರೆದು ಅಲ್ಲಲ್ಲಿಗೆ ಮನೋಹರವಾದ ಚಿತ್ರಗಳನ್ನು ಸೇರಿಸಿ ಮೂರು ಮೂರು ತಿಂಗಳಿಗೊಂದರಂತೆ ಪ್ರತಿವರ್ಷ ನಾಲ್ಕು ಸರ್ವಾಂಗಸುಂದರವಾದ ಗ್ರಂಥಗಳನ್ನು ಪ್ರಕಟಿಸುವೆವು. ಅವುಗಳಲ್ಲಿ ೨ ಪೌರಾಣಿಕ, ೨ ಐತಿಹಾಸಿಕ ಕಥೆಗಳಿರುವವು. ಗ್ರಂಥಮಾಲೆಯ ಕಾಯಂವರ್ಗಣಿದಾರರಿಗೆ ಎಲ್ಲ ಗ್ರಂಥಗಳನ್ನು ¾ ಬೆಲೆಗೆ ಕೊಡುವೆವು. ಅಂಥವರು ಮಾಲೆಯಲ್ಲಿ ಪ್ರಕಟವಾಗುವ ಎಲ್ಲ ಗ್ರಂಥಗಳನ್ನು ಕೊಂಡುಕೊಳ್ಳುವೆವೆಂದು ಒಪ್ಪಿಕೊಂಡು ಎರಡಾಣೆ ಪ್ರವೇಶಫೀಯನ್ನು ಕೊಟ್ಟು ತಮ್ಮ ಹೆಸರನ್ನು ರಜಿಸ್ಟರಮಾಡಿಸಿಕೊಳ್ಳಬೇಕಾಗುವದು. ಇಂದಿನವರೆಗೆ ಪ್ರಕಟಿಸಲ್ಪಟ್ಟ ಗ್ರಂಥಗಳು:—

| | | | |
|---|---|---|---|
| (೧) | ಸಾವಿತ್ರೀ-ಸತ್ಯವಾನ | ಪೌರಾಣಿಕ ಕಥೆ | ೦-೧೨-೦ |
| (೨) | ಪದ್ಮಿನಿ | ಐತಿಹಾಸಿಕ ಕಥೆ | ೦-೧೨-೦ |
| (೩) | ದಾಕ್ಷಾಯಿಣಿ | ಪೌರಾಣಿಕ ಕಥೆ | ೦- ೮ -೦ |
| (೪) | ಮಹಾರಾಣಿ ಲಕ್ಷ್ಮೀಬಾಯಿ | ಐತಿಹಾಸಿಕ ಕಥೆ | ೦-೧೨-೦ |
| (೫) | ಪಾರ್ವತಿ | ಪೌರಾಣಿಕ ಕಥೆ | ೦-೮-೦ |
| (೬) | ಕವಿತಾಕುಸುಮಮಂಜರಿ | ಖಂಡಕಾವ್ಯ | ೦-೫-೦ |

ವ್ಯವಸ್ಥಾಪಕ, **ಶ್ರೀಸರಸ್ವತೀಮಂದಿರ; ವಿಜಾಪುರ.**

THIS LITTLE WORK

*is*

***Very Respectfully Dedicated***

*to*

**KRISHNARAO HUNAGUND** Esq. B.

*Educational Inspector S. D.*

*by*

*his most obedient servant, the author*

( With his kind permission )

# ಅನುಕ್ರಮಣಿಕೆಯು.



## ಕರ್ನಾಟಕ ಭಾಷಾಭಿಮಾನಿಗಳಿಗೆ ವಿನಂತಿ.

# ಪೀಠಿಕೆ.

ಹಿಂದೊಂದು ಕಾಲದಲ್ಲಿ ಜಗತ್ತಿನಲ್ಲೆಲ್ಲಾ ತಾನು ತಾನೆಂದು ಮೆರಿದು ಪ್ರಪಂಚದ ಪ್ರಜೆಗಳಿಗೆಲ್ಲಾ ಆದರ್ಶವೆನಿಸಿಕೊಂಡ ಹಿಂದೂಗಳ ಧರ್ಮ, ವಿದ್ಯೆ, ತೇಜಸ್ಸು ಇವೆಲ್ಲಾ ಇಂದು ಎಲ್ಲಿ ಹೋದವು? ಹಿಂದೆ ಸರಸ್ವತೀತೀರದಲ್ಲಿ ವಾಸವಾಗಿದ್ದಾಗ ವೇದಪಠನದಿಂದ ಮನಶ್ಶಾಂತಿಯನ್ನೈದುತ್ತಿದ್ದ ಆರ್ಯಋಷಿಗಳ ವಂಶಜರೆನಿಸಿಕೊಂಡ ನಾವು ಇಂದು ಸ್ಕಾಟ್, ವರ್ಡ್ಸ್‌ವರ್ಥ, ಟೆನಿಸನ್ ಸಾಹೇಬರ ಕವಿತೆಗಳನ್ನು ಓದಿ ಸಮಾಧಾನತಾಳಬೇಕಾಗಿದೆ. ಪ್ರಾರಬ್ಧ! ಅಂದಿಗೆ ಅದೇ ಸುಖ, ಇಂದಿಗೆ ಇದೇ ಸುಖ ಮುಂದೆ ಇನ್ನೂ ಎಂಥ ಕಾಲ ಒದಗುವದೋ ಯಾರು ಬಲ್ಲರು? ಸಾವಿರ ಮಾತಿನಿಂದೇನು? ಹಿಂದೂಗಳಾದ ನಮ್ಮ ಶಿಕ್ಷಣದ ದಿಶೆಯೇ ಬದಲಾಗಿಹೋಗಿದೆ. ನಮ್ಮ ನಿಜವಾದ ಸುಧಾರಣೆಯಾಗಬೇಕಾದರೆ ನಮ್ಮವರಿಗೆ ಧಾರ್ಮಿಕ ಶಿಕ್ಷಣವು ಬೇಕೇಬೇಕು. ಇತ್ತಿತ್ತಲಾಗಿ ವಿದ್ಯಾಖಾತೆಯ ಅಧಿಕಾರಿಗಳು ಪಾಠಶಾಲೆಗಳಲ್ಲಿ ನೈತಿಕ ಶಿಕ್ಷಣವನ್ನೂ ಕೊಡಬೇಕೆಂದು ಪ್ರಯತ್ನಪಡುತ್ತಿದ್ದಾರಂತೆ. ಧಾರ್ಮಿಕ ಶಿಕ್ಷಣ ಬೇರೆ, ನೈತಿಕಶಿಕ್ಷಣ ಬೇರೆ ಹೀಗಾದರೆ ಅದರಿಂದ ಆಗತಕ್ಕಷ್ಟು ಪ್ರಯೋಜನವು ಎಂದೂ ಆಗಲಾರದು. ನಮ್ಮವರ ನೀತಿಯು ಸುಧಾರಣೆಯಾಗಬೇಕಾದರೆ ನಮ್ಮ ಹಿರಿಯರು ನಮಗೆ ಹಾಕಿಕೊಟ್ಟ ಮೇಲ್ಪಂಕ್ತಿಯನ್ನೇ ನಾವು ತೀಡಬೇಕು.

ನಮ್ಮ ಪುರಾಣಗಳು ನೀತಿತತ್ವಗಳ ಅಗರಗಳು. ಪ್ರಜೆಗಳ ನೀತಿಯ ಸುಧಾರಣೆಯೇ ಅವುಗಳ ಉದ್ದೇಶವು. ಆದರೆ ಕಾಲಮಹಿಮೆಯಿಂದ ನಮ್ಮ ಪುರಾಣಗಳು ಹಾಳುದೇಗುಲಗಳಂತಾಗಿವೆ. ಆದರಿಂದ ನಮ್ಮವರಿಗೆ ಅಲ್ಲಿಹೋಗಿ ದೇವತಾದರ್ಶನ ತಕ್ಕೊಳ್ಳಲು ಮನಸ್ಸು ಮೆಚ್ಚದು. ಹೀಗೆ ಇಚ್ಛೆ ಇಲ್ಲದವರನ್ನು ಮನವಲಿಸಿ ಒಳಗೆ ಗರ್ಭಾಲಯದ ವರೆಗೆ ಕರೆದೊಯ್ದು ದೇವದರ್ಶನ ಮಾಡಿಸುವ ಪುಣ್ಯಾತ್ಮರಾದ ಪುರಾಣಿಕರೂ ತೀರ ವಿರಳರಾಗಿದ್ದಾರೆ. ಕೀರ್ತನಕಾರರೂ ಕಡಿಮೆ. ಪುರಾಣವಸ್ತುಗಳಮೇಲೆ ನಮಗೆ ಮಮತೆಯಿಲ್ಲ. ಕಾಲಕ್ಕೆ ಅನುಸರಿಸಿ ನವೀನವಸ್ತುಗಳನ್ನು ನಿರ್ಮಿಸುವ ಶಿಲ್ಪಿಗರೂ ದುರ್ಲಭರು ಇಂಥ ಪರಿಸ್ಥಿತಿಯಕೂಡ ನಾವು ಕಾದಾಡಬೇಕಾಗಿದೆ. ಆದರಿಂದ ನಮ್ಮ ಕೈಲಾದಮಟ್ಟಿಗೆ ಕಾಲಾನುರೋಧದಿಂದ ಉಪಾಯಗಳನ್ನು ಯೋಚಿಸಿ ನಮ್ಮ ಬಾಲಕಬಾಲಿಕೆಯರಲ್ಲಿ ಧಾರ್ಮಿಕ ಕಲ್ಪನೆಯ ಅಂಕುರಗಳನ್ನು ಒಡೆಯಿಸಿ ವಿಚಾರಜಲಸೇಚನದಿಂದ ಅವನ್ನು ಬೆಳೆಯಿಸುವದು ವಿಶೇಷಜ್ಞರ ಕರ್ತವ್ಯವು ಈ ಕರ್ತವ್ಯವನ್ನು ಸ್ಮರಿಸಿ, ಈ ನಮ್ಮವರ ರುಚಿವೈಚಿತ್ರ್ಯವನ್ನು ಲಕ್ಷದಲ್ಲಿ ತಂದುಕೊಂಡು ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಯ ಸಂಪಾದಕರು ವ್ಯವಸಾಯಾಂತರದಲ್ಲಿ ಸಿಲುಕಿಕೊಂಡಿದ್ದರೂ ಪ್ರಸಿದ್ಧವಾದ ಪೌರಾಣಿಕ ಹಾಗು ಐತಿಹಾಸಿಕ ಕಥೆಗಳಿಗೆ ಆಧುನಿಕ ಸ್ವರೂಪವನ್ನು ಕೊಟ್ಟು ನಮ್ಮ ಕರ್ನಾಟಕ ಬಾಲಕಬಾಲಿಕೆಯರ ಮುಂದಿರಿಸುವ ಸ್ತುತ್ಯವಾದ ಕಾರ್ಯವನ್ನು ಕೈಕೊಂಡಿರುವರು. ಕರ್ನಾಟಕ ಸಮಾಜಬಂಧುಗಳು ಈ ಮಾತನ್ನು ನೆನಿಸಿಕೊಂಡು ಅವರ ಕಾರ್ಯಕ್ಕೆ ಮನಮುಟ್ಟಿ ಸಹಾಯಮಾಡಬೇಕೆಂದು ನಮ್ಮ ಆಗ್ರಹದ ಸೂಚನೆಯಿದೆ. ಇನ್ನು ಪ್ರಕೃತದ ಗ್ರಂಥದ ಕಡೆಗೆ ಹೊರಳುವ.

ಪ್ರಪಂಚದೊಳಗಿನ ಸಕಲ ಪ್ರಾಣಿಗಳೂ ತಮಗೆ ಸುಖವಾಗಬೇಕೆಂದು ಬಯಸುವರೇ ಅಲ್ಲದೆ, ಕಷ್ಟವು ಬಂದರೂ ಬರಲಿ, ಎನ್ನುವವರು ಇಲ್ಲವೇ ಇಲ್ಲ. ಅವರು ಕೈಕೊಳ್ಳುವ ಸಕಲ ಕಾರ್ಯ

ಗಳಲ್ಲಿಯೂ ಸ್ವಸುಖಸಂಪಾದನೆಯೆಂಬ ಉದ್ದೇಶವು ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷವಾಗಿ ಇದ್ದೇ ಇರುವದು. ಆದರೆ ಆ ತಮ್ಮ ಧ್ಯೇಯವನ್ನು ಸಂಪೂರ್ಣವಾಗಿ ಕೊನೆಮುಟ್ಟಿಸಿಕೊಳ್ಳುವ ಸಾಮರ್ಥ್ಯ ವುಳ್ಳವರು ಮಾತ್ರ ಲಕ್ಷಾವಧಿಯಲ್ಲಿ ಒಬ್ಬರು, ಎಂದೋ ಒಂದು ಕಾಲದಲ್ಲಿ ಮಾತ್ರ ನಮಗೆ ಕಂಡು ಬರುವರು. ಅಂದಮೇಲೆ ಇದರಲ್ಲಿ ಏನಾದರೊಂದು ರಹಸ್ಯವು ಇರಲೇ ಬೇಕು, ಎಂದಂತಾಯಿತು. ಆ ರಹಸ್ಯವನ್ನೇ ಅಂದರೆ ಯಾವ ತತ್ವವನ್ನು ಮುಂದಿಟ್ಟುಕೊಂಡು ನಡೆದರೆ ಪ್ರಪಂಚದಲ್ಲಿ ನಾವು ಕೈಕೊಂಡಿರುವ ಸಕಲ ಕಾರ್ಯಗಳಿಂದಲೂ ನಮಗೆ ಸುಖವೇ ಆಗುವದೋ ಆ ತತ್ವಗಳನ್ನು ಈ ಗ್ರಂಥದಲ್ಲಿ ವಿವರಿಸಿ ತೋರಿಸಿಯದೆ ಆದರಿಂದಲೇ ಗ್ರಂಥಕ್ಕೆ **« ಪ್ರಪಂಚಧರ್ಮ »** ಎಂದು ಕರ್ತರು ಹೆಸರನ್ನಿಟ್ಟಿರುವರು ವಿಶೇಷವಾಗಿ ಗ್ರಂಥದ ೩ನೇ ( ಶಿವದರ್ಶನರಹಸ್ಯ ), ೬ನೇ ( ಕೈಲಾಸವಾಸ ), ೮ನೇ ( ಉಭಯಸಂಕಟ ) ಪರಿಚ್ಛೇದಗಳನ್ನು ಓದುವಾಗ ಪಾಠಕರು ಹೆಚ್ಚು ತಾತ್ವಿಕದೃಷ್ಟಿಯಿಂದ ಓದಬೇಕೆಂದು ಸೂಚಿಸುವೆವು.

ಕಾದಂಬರಿಗಳೆಂದರೆ ವಾಙ್ಮಯದೊಳಗಿನ ಎಲ್ಲಕ್ಕೂ ಕೊನೆಯ ವರ್ಗದ ಗ್ರಂಥಗಳೆಂದು ಬಹು ಜನರು ನಂಬುವರು ಪಾಠಕರ ಮನೋರಂಜನೆಯೇ ಕಾದಂಬರಿಗಳ ಉದ್ದೇಶವೆಂದು ಲೇಖ ಕರು ನಂಬಿ ನಡೆಯುವವರೆಗೆ ಆ ಮಾತು ಸತ್ಯವೇ ಸರಿ. ಆದರೆ ಕಾದಂಬರಿಗಳ ಉದ್ದೇಶವು ಎಂದೂ ಇದಾಗಿರಕೂಡದೆಂದು ನಮ್ಮ ಭಾವನೆಯಿದೆ ಮತ್ತು ಪ್ರಕೃತದ ಕರ್ನಾಟಕ ಹಿತೈಷಿಣೀ ಗ್ರಂಥ ಮಾಲೆಯವರು ಮುಂದೆ ಇಟ್ಟುಕೊಂಡಿರುವ ‹‹ ಉದಾತ್ತವಾದ ನೈತಿಕ ತತ್ವಗಳನ್ನು ......'' ಎಂಬ ಉದ್ದೇಶವು ನಮಗೆ ಸ್ತುತ್ಯವಾದದ್ದಾಗಿ ತೋರುವದು ಮತ್ತು ಕಾದಂಬರಿಗಳನ್ನು ಬರೆಯತಕ್ಕವ ರೆಲ್ಲರೂ ಇದೇ ತರದ ಉದ್ದೇಶವನ್ನೇ ಮುಂದಿಟ್ಟುಕೊಳ್ಳಬಹುದೆಂದು ನನ್ನ ಮನಃಪೂರ್ವಕವಾದ ಸೂಚನೆಯಿರುವದು. ಪ್ರಕೃತದ ಗ್ರಂಥದ ಮೇಲೆ ಹೇಳಿದ ಮೂರು ಪರಿಚ್ಛೇದಗಳಲ್ಲಿ ಉದಾತ್ತವಾದ ನೀತಿಯತತ್ವಗಳ ಮನೋಹರವಾದ ಪ್ರತಿಪಾದನೆಯಿರುವಂತೆ ೧ನೇ ಪ ದೊಳಗಿನ ಹಿಮಾಲಯದ ವರ್ಣನೆ, ೨ನೇ ಪ ದೊಳಗಿನ ಸತಿಯ ಬಾಲ್ಯದ ತಂದೆತಾಯಿಗಳ ಕರ್ತವ್ಯವಿವರಣೆ, ೪ನೇ ೫ನೇ ಪ. ಗಳೊಳಗಿನ ಸತಿಯ ಮದುವೆಯ ವಿಚಾರ ಇವು ಅತಿಶಯ ಹೃದಯಂಗಮವಾಗಿರುವವು. ಗ್ರಂಥದ ಸರಳವೂ ಶುದ್ಧವೂ ಆದ ಭಾಷೆ ಚಿತ್ರಮುದ್ರಣಾದಿ ಬಾಹ್ಯಾಂಗಸೌಂದರ್ಯ ಇವನ್ನು ಪಾಠಕರು ಸಹಜವಾಗಿ ತಿಳಿದುಕೊಳ್ಳಬಹುದಾಗಿರುವದರಿಂದ ಆಬಗ್ಗೆ ನಾವೇನೂ ಹೇಳುವ ಅವಶ್ಯ ತೋರುವದಿಲ್ಲ. ಒಟ್ಟಿನಮೇಲೆ, ಕರ್ನಾಟಕ ವಾಙ್ಮಯದ ಅಭಿವೃದ್ಧಿಯನ್ನೇ ಪರಮಧ್ಯೇಯವಾಗಿ ಟ್ಟುಕೊಂಡಿರುವ ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಗೆ ಕರ್ನಾಟಕ ಬಂಧುಗಳು ಉದಾರಹಸ್ತ ದಿಂದ ಸಹಾಯ ಮಾಡಬೇಕೆಂತಲೂ ಅವರು ಕೊಟ್ಟಿರುವ ಅಲ್ಪ ಧನಸಹಾಯಕ್ಕೆ ಪ್ರತಿಯಾಗಿ ಮಾಲೆಯ ಸಂಪಾದಕರು ಅವರಿಗೆ ಅಮೌಲ್ಯವಾದ ಗ್ರಂಥಗಳನ್ನು ಅರ್ಪಿಸುವರೆಂತಲೂ ಈಗ ಮಾಲೆಯಲ್ಲಿ ಪ್ರಕಟವಾಗಿರುವ ಗ್ರಂಥಗಳಿಂದ ನಾವು ಖಂಡಿತವಾಗಿ ಹೇಳುತ್ತೇವೆ ಇತಿ.

ಕರ್ನಾಟಕ ಭಾಷಾಜನನಿಯ ನಿಸ್ಸೀಮಭಕ್ತ,

**ನಾರಾಯಣ ರಾಘವೇಂದ್ರ ದೇಶಪಾಂಡೆ.**

ಸನ್ಮಾನಿತ ಕಾರ್ಯದರ್ಶಿ ಕ ವಿ. ವ ಸಂಘ.



भीतिर्नास्ति भुजंग पुंगव विषात्प्रीति र्न चन्द्रामृता-
न्ना शौचंहि कपाल दाम लुलनाच्छौचं न गंगाजलात्
नोद्वेगश्चिति भस्मना न च सुखं गौरी स्तनालिंगना-
दात्मारामतया हिताहित समः स्वस्थो हरः पातुवः ॥

ಶ್ರೀಃ

# ಪ್ರಪಂಚಧರ್ಮ—ಮೊದಲನೆಯಭಾಗ

# ದಾಕ್ಷಾಯಿಣಿ.

## ಮೊದಲನೆಯ ಪರಿಚ್ಛೇದ.



### ಜನ್ಮೋತ್ಸವ.



ಪುಣ್ಯಭೂಮಿಯಾದ ಭರತಖಂಡದ ಉತ್ತರಮೇರೆಯನ್ನು ಆಕ್ರಮಿಸಿರುವ ಹಿಮಾಚಲವು ಸಾಗರವೇಷ್ಟಿತಳಾದ ಭೂಮಾತೆಯ ಸ್ಫಟಿಕಮಯವಾದ ಶಿರೋಭೂಷಣದಂತೆ ವಿರಾಜಿಸುತ್ತಿರುವದು. ವಿಪುಲವೂ ಅನಂತವೂ ಅಚ್ಛೇದ್ಯವೂ ಅಭೇದ್ಯವೂ ಆದ ಶೈಲಮಾಲೆಗಳು ಒಂದರ ಮೇಲೊಂದು. ಒಂದರಿಂದೊಂದು ಉನ್ನತೋನ್ನತವಾದ ಶಿಖರಗಳನ್ನು ಧರಿಸಿ, ಯುಗಯುಗಾಂತರಗಳಿಂದಲೂ ಒಂದೇಸವನೆ ವಿರಾಜಿಸುತ್ತ ಪೂರ್ವಪಶ್ಚಿಮವಾಗಿ ಹಬ್ಬಿರುವವು. ಈ ಶೃಂಗಾವಲಿಗಳು ಒಂದೆಡೆಯಲ್ಲಿ ಅತ್ಯುಚ್ಚವಾಗಿ ಒಂದೆಡೆಯಲ್ಲಿ ಆಕಾಶಚುಂಬಿಯಾಗಿ ಒಂದೆಡೆಯಲ್ಲಿ ಅಭ್ರಭೇದಿಯಾಗಿ ವಿರಾಜಿಸುವವು. ಇವನ್ನು ನೋಡಿದರೆ ಸ್ವರ್ಲೋಕಕ್ಕೂ ಭೂಲೋಕಕ್ಕೂ ಸಂಬಂಧವನ್ನುಂಟುಮಾಡಿದ ಸೋಪಾನಾವಲ್ಲಿಯೆಂದು ಒಮ್ಮೆ ಭಾಸವಾಗುವದು; ಮತ್ತೊಮ್ಮೆ ಈ ಪರ್ವತಶೃಂಗಗಳು ಹೇಗೆಯೋ ಮುಂದೆ ಯಾವದೋ ಒಂದು ಅಜ್ಞಾತವಾದ ಅನಂತಲೋಕವನ್ನು ಧರಿಸಿ ನಿಂತಿರುವ ಧರಣೀಧರನ ಮಹಾಜಂಘೆಗಳಂತೆ ತೋರುವವು. ಶಿವನ ಜಟೆಯಿಂದ ಗಲಿತಳಾದ ಗಂಗಾದೇವಿಯು

ಈ ಸೋಪಾನಮಾರ್ಗದಿಂದಲೇ ಭೂಲೋಕಕ್ಕೆ ಇಳಿದು ಬಂದು ಭಾರತ ಭೂಮಾತೆಯನ್ನು ಪಾವನಗೈದಳು. ಧನ್ಯ! ಭೂಮಾತೆ! ಧನ್ಯ! ಗಂಗಾಮಾತೆ!

ತ್ರಿಪಥಗಾಮಿನಿಯಾದ ಗಂಗಾದೇವಿಯು ಸ್ವರ್ಲೋಕದಿಂದ ಇಳಿದು ಬಂದು ಭೂಲೋಕಕ್ಕೆ ಮುಟ್ಟಿದ ಸ್ಥಳದಲ್ಲಿ ಪುರಾತನ ಕಾಲದಲ್ಲಿ **ದಕ್ಷಪುರಿ** ಯೆಂಬ ಮಹಾವೈಭವಯುಕ್ತವಾದ ನಗರವೊಂದು ವಿರಾಜಿಸುತ್ತಲಿತ್ತು. ಪ್ರಜಾ ಪತಿ **ದಕ್ಷಬ್ರಹ್ಮನು** ಆ ನಗರದ ಒಡೆಯನಾಗಿದ್ದನು. ಸಕಲ ಸಂಪತ್ತುಗಳಿಂದ ವಿರಾಜಿಸುತ್ತಲಿರುವ ಆ ಪಾರ್ವತ್ಯನಗರವು ಅತುಲವೂ ಅವರ್ಣನೀಯವೂ ಅನಂತ ವೂ ಆದ ಸೃಷ್ಟಿಸೌಂದರ್ಯದಿಂದ ಆವೃತವಾಗಿದ್ದಿತು. ಜಗದ್ವಿಖ್ಯಾತವಾದ ಹಿಮಾಲಯದ ಪ್ರಾಕೃತಿಕ ಮನೋಹರತೆಯನ್ನು ಎಷ್ಟೆಂದು ಬಣ್ಣಿಸಬೇಕು?

ಲೋಕವಿಖ್ಯಾತನಾದ ಆ ಧರಣೀಧರನ ಸುದೀರ್ಘವಾದ ಶರೀರದ ಒಂದೆಡೆಯಲ್ಲಿ ವಿಶಾಲವಾದ ಅರಣ್ಯವು ಅನಾದಿಕಾಲದಿಂದಲೂ ಗಗನಚುಂಬಿ ಗಳಾದ ಚಂದನ ದೇವದಾರು ಮುಂತಾದ ವೃಕ್ಷಗಳಿಂದ ಒಪ್ಪುತ್ತಿರುವದು. ಆ ವೃಕ್ಷಗಳ ಇಡಿಕಿರಿದ ಎಲೆಗಳ ರಾಶಿಗಳೊಳದಿಂದ ಒಳಗೆ ಸೇರಲು ಸೂರ್ಯ ಚಂದ್ರರ ಕಿರಣಗಳಿಗೂ ಅವಕಾಶವಿರಲಿಲ್ಲ. ಆ ವೃಕ್ಷಗಳಿಗೆ ಸುತ್ತಿಕೊಂಡು ತರತರದ ಕೋಮಲ ಲತೆಗಳು ಮಂದಮಾರುತನ ಬಲಾತ್ಕಾರಕ್ಕೆ ನಡುಗುತ್ತಿರು ವವೋ ಎಂಬಂತೆ ಮೆಲ್ಲಮೆಲ್ಲನೆ ತೊನೆಯುತ್ತಿರುವವು. ಅಸಂಖ್ಯವಾದ ಚಿಕ್ಕ ದೊಡ್ಡ ವನಸ್ಪತಿಗಳು ರಾಶಿರಾಶಿಯಾಗಿ ಬೆಳೆದು ತಮ್ಮ ತಮ್ಮ ಕರ್ಮಾನು ಗುಣವಾದ ಜನನ ಜೀವನ ಮರಣಗಳ ಆಟದಲ್ಲಿ ಆಸಕ್ತವಾಗಿದ್ದವು! ಅವೆ ಲ್ಲವೂ ಕಾಲಕಾಲಕ್ಕೆ ಪೂತು ಕಾತು ಮನೋಹರವಾಗಿ ತೋರುತ್ತಿದ್ದವು. ಒಂದರಲ್ಲಿ ಹೂವಾಗಿರುವದು; ಇನ್ನೊಂದರಲ್ಲಿ ಚಿಕ್ಕ ಮಿಡಿಗಳ ಗೊಂಚಲು ತಲೆಯುತ್ತಿರುವದು; ಮತ್ತೊಂದರಲ್ಲಿ ಹಣ್ಣುವರಿದ ಫಲಮಂಜರಿಗಳಿಂದ ಟೊಂಗೆ ಗಳು ಬಾಗಿ ನಿಂತಿರುವವು. ಸಮೀಪದಲ್ಲಿ ಒಂದೆರಡು ಗಿಡಗಳು ತೊಗಟೆಗಳೆದು ಟೊಂಗೆಗಳು ಆಗಾಗ ಒಣಗಿಹೋಗುತ್ತ ಬಂದು ಬೋಳಾಗಿನಿಂತಿರುವವು. ಕೆಲವು ಎಲೆಯಿಲ್ಲದೆ ಬರಲಾಗಿ ನಿಂತಿರುವವು. ಬಳಿಯಲ್ಲಿಯೇ ಒಂದೆರಡು ಗಿಡಗಳು ಒಣಗಿನಿಂತಿರುವದೂ ಉಂಟು. ಒಟ್ಟಿನಮೇಲೆ, ಸೂಕ್ಷ್ಮದೃಷ್ಟಿಯಿಂದ ನೋಡಿ ದರೆ ಸೃಷ್ಟಿಯಲ್ಲಿ ಸುಖದುಃಖಗಳ ದ್ವಂದ್ವವು ಸರ್ವತ್ರ ಗೋಚರವಾಗುವದು.

ಆ ಪರ್ವತರಾಜನ ಸುವಿಶಾಲವಾದ ಶರೀರದ ಮತ್ತೊಂದೆಡೆಯಲ್ಲಿ ಗಿರಿಶಿಖರಗಳ ಸಾಲಿನ ಇಳುಕಲಿನಲ್ಲಿ ದಟ್ಟವಾಗಿ ಬೆಳೆದ ಕಿರುಹುಲ್ಲಿನ ಹಸುರು ಛಾಯೆಯು ಮರಕತಮಣಿಯ ಪ್ರಭೆಯನ್ನು ದಿಕ್ಕುದಿಕ್ಕುಗಳಿಗೆ ಪಸರಿಸುವದು. ಆ ಹಸರು ಹುಲ್ಲಿನ ತುದಿಯಲ್ಲಿ ಅರಳಿನಿಂತಿರುವ ಚಿಕ್ಕ ದೊಡ್ಡ, ಹಲವು ಬಣ್ಣದ ಹೂವಿನ ರಾಶಿಗಳನ್ನು ನೋಡಿದರೆ ಹಸುರು ಶಿಲೆಯ ನೆಲಗಟ್ಟಿನಲ್ಲಿ ಸೇರಿಸಿದ ವಿಧವಿಧದ ಬಣ್ಣದ ಚಿಕ್ಕ ದೊಡ್ಡ ಹರಳುಗಳ ಕೆತ್ತಿಗೆಯ ಕೆಲಸವು ಸ್ಮರಣೆಗೆ ಬರುವದು. ಬಳಿಯಲ್ಲಿರುವ ಕಂದರವೊಂದರಲ್ಲಿ ಸ್ಫಟಿಕದಂತೆ ಸ್ವಚ್ಛವಾದ ನೀಲ ವರ್ಣದ ಜಲರಾಶಿಯಿಂದೊಪ್ಪುವ ಚಿಕ್ಕಸರೋವರವಿರುವದು. ಅದರಲ್ಲಿ ರಾಶಿ ರಾಶಿಯಾದ ಕುಮುದ, ಕುವಲಯ, ಕಲ್ಹಾರಗಳು ಅರಳಿ ಮಗಮಗಿಸುತ್ತಿರುವವು; ಚಕ್ರವಾಕಗಳು ಹಾರಾಡುವವು; ಹಂಸಗಳು ಕುಣಿಯುವವು. ನೆರೆಯಲ್ಲಿಯೇ ದೊಡ್ಡ ದೊಡ್ಡ ಬಿದಿರಿನ ಹಿಂಡುಗಳ ಮಧ್ಯದೊಳಗಿನಿಂದ ಗಾಳಿಯು ಸುಯ್ಯೆಂದು ಹಾಯ್ದುಹೋಗಲು ಅದರ ಆಘಾತದಿಂದ ಅಲ್ಲಾಡುವ ಬಿದರುಗಳ ಪರಸ್ಪರ ಘರ್ಷಣದಿಂದ ಮನೋಹರವಾದ ಸ್ವರವು ಹುಟ್ಟಲು ಅದು ವನದೇವತೆಯು ಇಂಪಾದ ಗಾಯನಧ್ವನಿಯೆಂಬಂತೆ ತೋರುವದು.

ಆ ಮಹಾರಣ್ಯದೊಳಗಿನ ಮರಮರದಲ್ಲಿಯೂ ಚಿತ್ರವಿಚಿತ್ರವಾದ ಪಕ್ಷಗಳುಳ್ಳ ಪಕ್ಷಿಸಮೂಹವೂ, ಅಡವಡವಿಯಲ್ಲಿ ವಿಧವಿಧದ ಪಶುಸಮೂಹವೂ, ಸುಖಾವಹವಾದ ತೃಣಶಯ್ಯೆಯಲ್ಲಿ ತರತರದ ಕ್ರಿಮಿಕೀಟಕಗಳೂ ಸದಾ ಸುಖದಿಂದ ಕಾಲಕಳೆಯುವವು. ಕೃಷ್ಣವರ್ಣದ ಪರ್ವತಖಂಡದಂತೆ ತೋರುತ್ತಿರುವ ಕರಿಯ ಆನೆಗಳ ಹಿಂಡು ಘೀಳಿಡುತ್ತ ಉನ್ಮತ್ತತೆಯಿಂದ ಸಿಕ್ಕ ಸಿಕ್ಕ ಗಿಡುಮರಗಳನ್ನು ಮುರಿದು ಎಸೆಯುತ್ತ ಸಂಚರಿಸುವದು. ಕೃಷ್ಣಮೃಗಗಳು ಅಲ್ಲಲ್ಲಿಗೆ ಹಿಂಡುಗಟ್ಟಿಕೊಂಡು ಮೆಲುಕಾಡಿಸುತ್ತ ನಿಂತಿರುವವು; ಗಂಡುಮೃಗವು ತನ್ನ ಕೋಡಿನಿಂದ ಮೆಲ್ಲ ಮೆಲ್ಲಗೆ ಹೆಣ್ಣು ಮೃಗದ ಕಣ್ಣಿನ ಬಳಿಯಲ್ಲಿ ತುರಿಸುವದು. ಸಿಂಹ ವರಾಹ ಶಾರ್ದೂಲ ವನಮಹಿಷಾದಿ ಉಗ್ರಪ್ರಾಣಿಗಳು ತಮ್ಮ ತಮ್ಮ ಮನಬಂದಂತೆ ಸಂಚರಿಸುತ್ತಿರುವವು; ತಮ್ಮ ಬಲದಿಂದ ಬಡಪ್ರಾಣಿಗಳನ್ನು ಮುರಿದು ತಿಂದು, ಹೊತ್ತು ಬಂದಾಗ ಬಂದರಗೂಡೊಂದು ಕಾದಾಡಿ ಕಾಲವನ್ನು ಕಳೆಯುತ್ತಿರುವವು. ಆಶ್ಚರ್ಯದ ಮಾತೇನಂದರೆ, ತಮ್ಮೆಲ್ಲರಿಗೂ ಅತ್ಯಂತ ಬಲಶಾಲಿಯಾದ ವೈರಿಯೊಬ್ಬನಿರುವನೆಂಬ ಮಾತಿನ ಕಡೆಗೆ ಮಾತ್ರ ಯಾರಲಕ್ಷವೂ

ಇರದು. ಹಿಮಾಚಲದ ಮೇಲಿನ ಹೇಮಂತರಾಜನ ರಾಜ್ಯಶಾಸನಕ್ರಮವನ್ನು ಕೇಳುವದೇನದೆ? ಆತನ ಆಗಮನಸೂಚಕವಾದ ಈಶಾನ್ಯಮಾರುತನ ಡಂಗುರದ ಧ್ವನಿಯನ್ನು ಕೇಳಿದೊಡನೆಯೇ ಗಿಡುಮರಗಳು ಕಟಕಟನೆ ನಡುಗಿ ಎಲೆಗಳು ತೊಗಟೆಗಳನ್ನು ಉಚ್ಚಿ ಬರಲಾಗಿ ನಿಲ್ಲುವವು. ಪಶುಪಕ್ಷಿ ಕ್ರಿಮಿ ಕೀಟಕಗಳಿಗೆ ಒಳಗಿನ ಉಸುಲು ಒಳಗೆ ಹೊರಗಿನ ಉಸುಲು ಹೊರಗೆ ಹೀಗಾಗಿ ಹೋಗುವದು; ಕೆಲವು ಹಿಮದಲ್ಲಿ ಹುಗಿದುಹೋಗುವವು. ಆದರೆ ಇದೊಂದು ಗುಣ: ಎಲ್ಲಿಯವರೆಗೆ ಈ ತರದ ಮಹಾಸಂಕಟವು ಪ್ರತ್ಯಕ್ಷನಾಗಿ ಬರುವದಿಲ್ಲವೋ ಅಲ್ಲಿಯು ವರೆಗೂ ಅವಕ್ಕೆ ಅದರ ಅರಿವೇ ಇರದು; ಸಂಕಟ ನಿವಾರಣೆಯಾದ ಎರಡನೆಯ ದಿನವೇ ಅವುಗಳ ಆನಂದಕ್ಕೆ ಪಾರವೇ ಇರದು. ಆದ್ದರಿಂದ ಹಿಂದಿನ ಸುಖದುಃಖಗಳನ್ನು ಇಂದು ಪುನಃ ಪುನಃ ಸ್ಮರಿಸಿಕೊಂಡು ಅನ್ನಾಹಾರಗಳನ್ನು ತೊರೆದು ಕಣ್ಣೀರಿಡುವ, ಭವಿಷ್ಯದ ಸಂಕಟವನ್ನು ಸ್ಮರಿಸಿ ಈಗಲೇ ಎದೆಬೊಡೆದುಕೊಂಡು ಬೆಂದು ಬೆಂಡಾಗುವ, ಸುವಿಚಾರಿಯೆಂಬ, ಅಹಂಕಾರದ ಮೂರ್ತಿಯಾದ ಮಾನವಪ್ರಾಣಿಗಿಂತಲೂ ಈ ತರದ ಗಿಡುಮರ, ಪಶುಪಕ್ಷಿ, ಕ್ರಿಮಿ ಕೀಟಕಗಳ ಅವಸ್ಥೆಯೇ ಸಾವಿರ ಪಾಲಿಗೆ ಮೇಲೆಂದು ನಮಗೆ ತೋರುವದು.

ಈ ಬಗೆಯ ವರ್ಣನೀಯವಾದ ಸೃಷ್ಟಿಸೌಂದರ್ಯದಿಂದ ಆವೃತವಾದ ದಕ್ಷಪುರಿಯ ಮಧ್ಯಭಾಗದಲ್ಲಿ ದಕ್ಷರಾಜನ ಅರಮನೆಯಿರುವದು. ಅರ್ವಾಚೀನ ಕಾಲದ ರಾಜಧಾನಿಗಳಂತೆ ಈ ದಕ್ಷರಾಜನ ರಾಜಧಾನಿಗೆ ಕೃತ್ರಿಮವಾದ ಕೋಟೆಕೊತ್ತಳಗಳೇನೂ ಇರಲಿಲ್ಲ. ಕೃತ್ರಿಮವಾದ ಕಾವಲು ಸೇವಲುಗಳೂ ಕಡಿಮೆ. ದಕ್ಷರಾಜನ ಅರಮನೆಯು ಒಂದು ಪರ್ವತಶಿಖರದ ಇಳುಕಲಿನಲ್ಲಿರುವದು. ಕೆಳಗಡೆಗೆ ಪುಣ್ಯನದಿ ಭಾಗೀರಥಿಯ ಶಾಖೆಯಾದ ನೀಲಧಾರಿಯು ಸ್ಫಟಿಕ ಸ್ವಚ್ಛವಾದ ತಿಳಿನೀರಿನಿಂದ ಹರಿಯುತ್ತಿರುವದು. ಅದರ ತಳದಲ್ಲಿರುವ ಹರಳುಗಳೂ ಉಸುಕೂ ಆನಂದದಿಂದ “ ಚಳಕ್ ಚಳಕ್ ” ಹೊಳೆಯುತ್ತ ಶರವೇಗದಿಂದ ಈಸುತ್ತಿರುವ ಚಿಕ್ಕ ದೊಡ್ಡ ಮೀನಗಳೂ ನೋಡುವವರ ಚಿತ್ತಾಕರ್ಷಕವಾಗಿರುವವು. ಆ ನೀಲಧಾರೆಗೆ ಕೃತ್ರಿಮವಾದ ಕಟ್ಟೆ, ಮೆಟ್ಟು, ಘಾಟಗಳೇನೂ ಇರಲಿಲ್ಲ. ಪ್ರಾಚೀನರಿಗೆ ಸ್ವಾಭಾವಿಕವಾದ ಸೃಷ್ಟಿಸೌಂದರ್ಯಗಳ ಮೇಲೆಯೇ ಬಲು ಪ್ರೀತಿ. ಸೃಷ್ಟಿದೇವತೆಯು ಸೃಷ್ಟಿಸಿರುವ ಅನುಪಮ ಸೌಂದರ್ಯಸುಧೆಗೆ ಮನುಷ್ಯಕೃತಿಯ ಹಿಟ್ಟಿನ ನೀರು ಸರಿಗಟ್ಟುವದೆಂತು? ಆದರಿಂದಲೇ ದಕ್ಷರಾಜ

ನು ಕೂಡ ತನ್ನ ಅರಮನೆಯ ಮುಂದಿನ ನೀಲಧಾರೆಗೆ ಕೃತ್ರಿಮವಾಗಿ ವಿಕೃತಿಯನ್ನುಂಟುಮಾಡಿರಲಿಲ್ಲ. ಸುತ್ತಲಿನ ವನದೇವತೆಯ ಸೊಬಗನ್ನೂ ಅವನು ಕೆಡಿಸಿರಲಿಲ್ಲ. ಸಂಧ್ಯಾಕಾಲದಲ್ಲಿ ರಾಜನು ನೀಲಧಾರೆಯ ದಂಡೆಯಲ್ಲಿರುವ ವಿಶಾಲವಾದ ಹಾಸಗಲ್ಲಿನ ಮೇಲೆ ಬಿಲ್ವವೃಕ್ಷದ ನೆರಳಿನಲ್ಲಿ ರಾಜಸಭೆಯನ್ನು ನೆರೆಯಿಸುವನು. ಅವನಿಗೆ ಮಾನವೀಕೃತಿಯ ಬೆಳ್ಳಿ ಬಂಗಾರ ಹರಳು ಕಲ್ಲುಗಳ ರಚನೆಯ ಬಹು ಮೌಲ್ಯವಾದ ಸಿಂಹಾಸನಕ್ಕಿಂತಲೂ ಈಶ್ವರೀಕೃತಿಯ ಅಮೌಲ್ಯವಾದ ಪಾಷಾಣಾಸನದ ಮೇಲೆಯೇ ಬಲು ಅಕ್ಕರೆ. ಅರಸನಿಗೆ ತಕ್ಕ ಅರಸಿ; ಅವರಿಗೆ ತಕ್ಕ ಮಂತ್ರಿಪರಿಜನರು! ಪ್ರಜೆಗಳು! ಎಲ್ಲರಿಗೂ ಸೃಷ್ಟಿಯ ಸಹಜ ಸೌಂದರ್ಯದ ಮೇಲೆಯೇ ಬಹು ಮಮತೆ.

ಇಂತೀ ಪರಿಯಿಂದ ಮೆರೆಯುವ ದಕ್ಷಪುರಿಯಲ್ಲಿ ಇಂದು ಆನಂದಕೋಲಾಹಲವು ತುಂಬಿ ಹೊರಸೂಸುತ್ತಿದ್ದಿತು. ಸರ್ವತ್ರ ಗುಡಿತೋರಣಗಳು ವಿರಾಜಿಸುತ್ತಿದ್ದವು. ಮನೆಮನೆಯಲ್ಲ ಮಹೋತ್ಸವ. ಬಾಗಿಲಲ್ಲಿ ತಳಿರತೋರಣಗಳನ್ನು ಕಟ್ಟಿ, ಅವಕ್ಕೆ ಪೂಮಾಲೆಗಳನ್ನು ಅಲೆಬಿಟ್ಟು, ಅಂಗಳದಲ್ಲಿಯೂ ಮನೆಯಲ್ಲಿಯೂ ಹಿಟ್ಟು ಕುಂಕುಮಗಳ ರಂಗವಲ್ಲಿಯನ್ನಿಕ್ಕಿ ಸಿಂಗರಿಸಿದ್ದರು. ಜನರ ಮುಖದಲ್ಲಿ ಆನಂದದ ತರಂಗಗಳು ಉಕ್ಕಿ ಬರುತ್ತಿದ್ದವು. ಪುರುಷರೂ ಸ್ತ್ರೀಯರೂ ತರುಣರೂ ವೃದ್ಧರೂ ಬಾಲಕಬಾಲಿಕೆಯರೂ ಹೊಸ ಬಟ್ಟೆಗಳನ್ನುಟ್ಟುಕೊಂಡು ಪೆಟ್ಟಿಗೆಯಲ್ಲಿಟ್ಟಿದ್ದ ಅಲಂಕಾರಗಳನ್ನೆಲ್ಲಾ ಧರಿಸಿಕೊಂಡಿದ್ದರು. ಆದ್ದರಿಂದ ಜನಸಮೂಹವೆಲ್ಲಾ ವಸ್ತ್ರಾಲಂಕಾರಗಳಿಂದ ಮುಚ್ಚಿರುವಂತೆ ತೋರುತ್ತಿತ್ತು. ದಕ್ಷಪುರಿಯ ಈ ಬಗೆಯ ಆನಂದಾತಿಶಯಕ್ಕೆ ಕಾರಣವೇನು?

ಕಾರಣವಿದ್ದಿತು. ಅರಸನ ಸುಖವೇ ಪ್ರಜೆಗಳ ಸುಖ. ರಾಜನಿಗೆ ಆನಂದವಾದರೆ ಪ್ರಜೆಗಳಿಗೆ ಆನಂದವಾಗುವದು. ಆದ್ದರಿಂದ ದಕ್ಷಪುರಿಯ ಪ್ರಜೆಗಳೆಲ್ಲರೂ ತಮ್ಮ ಅರಸನ ಆನಂದದೊಡನೆ ಸಮಭಾವವನ್ನು ತಳೆದಿದ್ದರು. ಪ್ರಜಾಪತಿ ದಕ್ಷಬ್ರಹ್ಮನು ಈ ದಿನ ಆನಂದಸಾಗರದಲ್ಲಿ ಓಲಾಡುತ್ತಿದ್ದನು. ಅದರಿಂದಲೇ ಅತನ ಪ್ರಜೆಗಳೆಲ್ಲರೂ ಸಂತೋಷಾತಿಶಯದಿಂದ ಹಬ್ಬವನ್ನು ಆರಂಭಿಸಿದ್ದರು. ಸರ್ವತ್ರ ಆನಂದವೇ ಆನಂದವಾಗಿದ್ದಿತಾದ್ದರಿಂದ ದುಃಖಕ್ಕೆ ಅಲ್ಲಿ ಅವಕಾಶವೇ ಇರಲಿಲ್ಲ. ದಕ್ಷಪುರಿಯಲ್ಲಿಯ ಈ ತರದ ಆನಂದ, ಉತ್ಸವ, ಆಹ್ಲಾದಗಳಿಗೆ ವಿಶೇಷ ಕಾರಣವಿದ್ದಿತು. ದಕ್ಷರಾಜನ ಪಟ್ಟದರಸಿಯು ಇಂದು ಒಂದು ಅಮೌಲ್ಯವಾದ ಕನ್ಯಾ

ರತ್ನವನ್ನು ಪಡೆದಿದ್ದಳು. ಅದಕ್ಕಾಗಿಯೇ ಆತನಿಗೂ ಆತನ ಪ್ರಜೆಗಳಿಗೂ ಇಷ್ಟೊಂದು ಆನಂದವಾಗಿದ್ದಿತು. ದುರ್ದೈವಿಗಳಾದ ನಾವು ಕನ್ಯೆಯು ಹುಟ್ಟಿದ ಳೆಂಬದನ್ನು ಕೇಳಿ ಕರುಳಿಗೆ ಬರೆಯೆಳೆದುಕೊಳ್ಳುವೆವು. ಸುದೈವದಿಂದ ದಕ್ಷ ಬ್ರಹ್ಮನು ನಮ್ಮಂತೆ ದರಿದ್ರನಾಗಿದ್ದಿರಲಿಲ್ಲ. ನಮ್ಮ ಸಮಾಜದಂತೆ ಆಗಿನ ಸಮಾ ಜದ ಬಂಧನವಿದ್ದಿಲ್ಲ. ಉಭಯಕುಲ ಪವಿತ್ರಕಾರಿಣಿಯೆಂಬ ಹೆಸರು ಆಗಿನ ಕಾಲ ದಲ್ಲಿ, ಆಗಿನ ಸಮಾಜದಲ್ಲಿ, ಕನ್ಯಾರತ್ನಕ್ಕೆ ಅನ್ವರ್ಥಕವಾಗಿದ್ದಿತು. ದಕ್ಷರಾಜನಿಗೆ ಈಕೆಯು ೩೪ನೆಯ ಮಗಳು, ಆದರೂ ಅವನಿಗೆ ಆನಂದವೇ!

ಪ್ರತ್ಯಕ್ಷ ಶ್ರೀದೇವಿ ಭೂದೇವಿಯರ ಅವತಾರವೆನಿಸುವ ನವಜಾತ ಕನ್ಯಾರತ್ನ ವನ್ನು ನೋಡಿ ದಕ್ಷಬ್ರಹ್ಮನೂ ಆತನ ಪತ್ನಿಯೂ ಅಂತರಂಗದಲ್ಲಿ ಅಮಿತ ಆನಂದ ವನ್ನು ಅನುಭವಿಸಿದರು. ಇಂಥ ಸರ್ವ ಸುಲಕ್ಷಣಸಂಪನ್ನೆಯಾದ ಕನ್ನೆಯನ್ನು ಅವರು ಇನ್ನೆಲ್ಲಿಯೂ ನೋಡಿರಲಿಲ್ಲ. ಎಷ್ಟು ಸುಂದರಸುಕುಮಾರವಾದ ಅಂಗೋಪಾಂಗಗಳೋ ಅಷ್ಟೇ ಸುಂದರ ಸುಯೋಗ್ಯವಾದ ಅವಯವ ಸನ್ನಿ ವೇಶವಾಗಿದ್ದಿತು. ಇವೆಲ್ಲಕ್ಕೂ ಹೆಚ್ಚಿನದಾದ, ವ್ಯಕ್ತ್ವಾಯ ಮೂರ್ತಿಯ ಜೀವ ಕಳೆಯಂತಿರುವ, ಅವಳ ಉಜ್ವಲವಾದ ಮುಖಶ್ರೀಯು ಪ್ರೇಕ್ಷಕರ ಹೃದಯ ವನ್ನು ಆಕರ್ಷಿಸಿ ಆನಂದಪರವಶತೆಯನ್ನುಂಟುಮಾಡುವದು, ಕನ್ಯೆಯ ಶರೀರ ಕಾಂತಿಯಿಂದ ಪ್ರೇಕ್ಷಕರು ತಮ್ಮ ದೃಷ್ಟಿಯನ್ನು ಹಿಂದಕ್ಕೆ ಸೆಳೆಯಲಾರರು. ಎರಡನೆಯ ಕಡೆಗೆ ತಿರುಗಿಸಲಾರರು; ಅವರ ನೋಡುವ ಇಚ್ಛೆಯು ಕ್ಷಣ ಕ್ಷಣಕ್ಕೂ ಹೆಚ್ಚುತ್ತಹೋಗುವದಲ್ಲದೆ ಕಡಿಮೆಯಾಗದು; ಮನಸ್ಸಿಗೆ ತೃಪ್ತಿ ಯುಂಟಾಗದು. ಅದರಿಂದಲೇ ದಕ್ಷಬ್ರಹ್ಮನು ಮಗಳನ್ನು ನೋಡಿ ಆನಂದಪರ ವಶನಾಗಿದ್ದನು.

ದಕ್ಷಬ್ರಹ್ಮನಿಗೆ ತನ್ನ ಮೊದಲಿನ ಇಪ್ಪತ್ತೇಳುಜನ ಹೆಣ್ಣುಮಕ್ಕಳಲ್ಲಿ ಯಾರ ವಿಷಯವಾಗಿಯೂ ಇಷ್ಟು ಮೋಹವುಂಟಾಗಿರಲಿಲ್ಲ; ಅವರಲ್ಲಿ ಯಾರೂ ಅವ ನನ್ನು ಈ ರೀತಿಯಾಗಿ ಮಾಯಾಬಂಧನದಲ್ಲಿ ತೊಡಕಿಸಿರಲಿಲ್ಲ. ಅವರೆಲ್ಲರೂ ಈಗ ಚಂದ್ರಲೋಕದಲ್ಲಿ ಇರುತ್ತಿದ್ದರು. ಇಂದಿನವರೆಗೂ ದಕ್ಷಬ್ರಹ್ಮನಿಗೂ ಆತನ ಪತ್ನಿ ಗೂ ತಮ್ಮ ಆ ಕನ್ಯೆಯರು ಪ್ರತಿಕ್ಷಣವೂ ಸ್ಮರಣೆಗೆ ಬರುತ್ತಿದ್ದರು. ಆದರೆ ಈಗ ಈ ನವಜಾತ ದೇವಿಯ ಅವತಾರಶಿಶುವನ್ನು ನೋಡಿದಾಕ್ಷಣವೇ ಅವರಿಗೆ ಇತರ ಪ್ರಪಂಚದ ಮೋಹವೆಲ್ಲಾ ಇವಳಲ್ಲಿಯೇ ಐಕ್ಯವಾಗಿದ್ದಂತೆ ತೋರಿತು.

ಮೋಹವೆಂಬದು ಅವರಿಗೆ ಆ ಶಿಶುವಿನ ಹೊರತು ಎರಡನೇ ಯಾವ ಕಡೆಯ ಲ್ಲಿಯೂ ತಿಲಮಾತ್ರವಾದರೂ ಕಂಡುಬರಲಿಲ್ಲ. ಆ ಶಿಶುವನ್ನು ನೋಡಿದ ಮಾತ್ರ ದಿಂದಲೇ ಸಕಲೇಂದ್ರಿಯಗಳೂ ತೃಪ್ತಿಯನ್ನು ಹೊಂದುತ್ತಿದ್ದವು. ಹಸಿವೆಯಾ ಗದು. ನೀರಡಿಕೆಯೆನಿಸದು, ಏನನ್ನೂ ನೋಡುವ ಇಚ್ಛೆ ಹುಟ್ಟದು, ಕೇಳುವ ಅಪೇಕ್ಷೆ ತೋರದು, ಸ್ವರ್ಗಸುಖದ ಆಕಾಂಕ್ಷೆಯೂ ಕೂಡ ಉದ್ಭವಿಸದು. ಮಗುವನ್ನು ಬಿಟ್ಟು ತೊಲಗಲು ಮನಸ್ಸು ಒಪ್ಪದು. ಇಂಥ ಮಹಾ-ಮೋಹ-ಸಂಘಟನೆಗೆ ಆ ಮಗುವಿನಲ್ಲಿ ಅಂಥ ಮಹತ್ವವೇನಿದ್ದಿತೋ ತಿಳಿಯದು.

ಯಥಾಕಾಲದಲ್ಲಿ ದಕ್ಷಬ್ರಹ್ಮನು ಮಗುವಿನ ನಾಮಕರಣದ ಸಮಾರಂಭ ವನ್ನು ನೆರವೇರಿಸಿದನು. “**ಸತೀ**” ಎಂದು ನಾಮಕರಣವಾಯಿತು. ದಕ್ಷ ರಾಜನ ಪುತ್ರಿಯಾದದ್ದರಿಂದ ಆವಳಿಗೆ “**ದಾಕ್ಷಾಯಿಣಿ**” ಯೆಂದೂ ಇನ್ನೊಂದು ಹೆಸರಿಟ್ಟಿದ್ದರು. ಸತಿಯ ನಾಮಕರಣ ಸಮಾರಂಭಕ್ಕೆ ಚಂದ್ರಲೋಕ ದಿಂದ ಆಕೆಯ ಇಪ್ಪತ್ತೇಳು ಜನ ಭಗಿನಿಯರೂ ಬಂದಿದ್ದರು. ಅವರು ಬಾಲಿಕಾ ಸತಿಯನ್ನು ನೋಡಿ ವಿಸ್ಮಯಗೊಂಡರು. ಅವರು ಸತಿಯಲ್ಲಿ ತಮ್ಮೆಲ್ಲರಿಗಿಂತಲೂ ವಿಶೇಷವಾದ ಯಾವದೋ ಒಂದು ಗುಣವಿರುವದೆಂಬದನ್ನು ಕಂಡುಕೊಂಡರು. ತಂದೆತಾಯಿಗಳ ಈಗಿನ ಅಂತರಂಗ ಬಹಿರಂಗಗಳ ವರ್ತನವೂ ಇದಕ್ಕೊಂದು ಬಲವತ್ತರವಾದ ಸಾಕ್ಷಿಯಾಗಿದ್ದಿತು. ಅತ್ತೆಯ ಮನೆಯಿಂದ ಬಂದ ಹೆಣ್ಣು ಮಕ್ಕಳ ಕ್ಷೇಮಸಮಾಚಾರಗಳನ್ನು ಆತ್ಮಾದರದಿಂದ ಕೇಳಿಕೊಂಡು ಅವರ ಸುಖದುಃಖಗಳನ್ನು ಅರಿತು ಸುಖದಲ್ಲಿ ಸುಖಾನುಭವವನ್ನೂ ದುಃಖದಲ್ಲಿ ದುಃಖಾನುಭವವನ್ನೂ ಪಡೆದು ಅವರಿಗೆ ತಕ್ಕ ಶಾಂತಿಸಮಾಧಾನಗಳನ್ನು ತೋರಿ ಸುವದು ತಾಯಂದಿರ ಕರ್ತವ್ಯವು. ಆ ಕರ್ತವ್ಯಾನುಗುಣವಾಗಿ ದಕ್ಷರಾಜನ ಪತ್ನಿಯೂ ತನ್ನ ಮಕ್ಕಳ ಸುಖದುಃಖಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದಳು. ಆದರೆ ಈ ಸಲ ಅವಳು ಸತಿಯ ಲಾಲನಪಾಲನಗಳಲ್ಲಿಯೇ ಆಸಕ್ತಳಾಗಿ ಬಿಟ್ಟ ದ್ದರಿಂದ ಆ ಕಡೆಗೆ ಅವಳ ಲಕ್ಷ್ಯವು ಸಾಕಷ್ಟು ಹೋಗಲಿಲ್ಲ. ಇದರಿಂದ ಅವ ರಿಗೆ ತಾಯಿಯ ಮನೆಯು ತುಸು ಬೇಸರವಾಗಿ ತೋರಿದರೂ ಸತಿಯ ಅತು ಲವೂ ಅಪ್ರತಿಮವೂ ಆದ ಮೋಹದಿಂದ ಅವರು ತಮ್ಮ ಸಕಲ ಮನೋವಿಕಾರ ಗಳನ್ನೂ ಹತ್ತಿಕ್ಕಿಕೊಂಡು ಸತಿಯ ಪ್ರೀತಿಯಿಂದಲೇ ಆನಂದಪಡುತ್ತಿದ್ದರು. ಪ್ರತಿಯೊಬ್ಬರೂ ಬಂದು ಬಂದು ಸತಿಯನ್ನು ಎತ್ತಿಕೊಳ್ಳುವರು; ಚಂದ್ರಬಿಂಬ

ಸದೃಶವಾದ ಮುಖವನ್ನು ಚುಂಬಿಸಿ ಚುಂಬಿಸಿ ಆನಂದಪಡುವರು; ತಮ್ಮ ತಮ್ಮ ಕೊರಳೊಳಗಿನ ಹಾರಗಳನ್ನು ಹಾಕಿ, ಅಲಂಕಾರಗಳನ್ನಿಟ್ಟು, ನೋಡಿ ನೋಡಿ, ಮುದ್ದಿಟ್ಟು ಮುದ್ದಿಟ್ಟು ಸಂತೋಷಪಡುವರು. ಒಂದೆರಡು ದಿನಗಳ ತರುವಾಯ ಅವರು ತಮ್ಮ ತಮ್ಮ ಮನೆಗಳಿಗೆ ತಿರುಗಿಹೋದರು. ಹೋಗುವಾಗ ಸತಿಯ ಅಂಗಸೌಷ್ಟ್ಯವ, ಮುಖಕಾಂತಿ, ಇವುಗಳನ್ನು ನೆನೆನೆನೆದು ಆನಂದಪರವಶರಾಗು ವರು; ತುಸು ಈರ್ಷೆಯೂ ಅಂತರಂಗದಲ್ಲಿ ಜನಿಸುವದು. ಸತಿಯು ತಂದೆತಾಯಿ ಗಳ ಪ್ರೇಮವನ್ನು ಅಖಂಡವಾಗಿ ಎಲ್ಲಿ ಸೆಳೆದುಕೊಂಡು ಬಿಡುವಳೋ ಎಂಬ ಸಂಶಯವೂ ಅದರಿಂದುಂಟಾಗುವ ಮತ್ಸರವೂ ಕೊನೆಗೆ ದುಃಖರೂಪವಾಗಿ ಪರಿ ಣಮಿಸಿ ಅವರ ಮನಸನ್ನು ಕಳವಳಪಡಿಸುತ್ತಿದ್ದಿತು. ಹೆಣ್ಣುಮಕ್ಕಳಿಗೆ ಅತ್ತೆಯ ಮನೆಯಲ್ಲಿ ಎದೆಯಲ್ಲಿ ಖಡ್ಗವನ್ನು ನೆಟ್ಟರೂ ಆಗದಂಥ ದುಃಖವು ತಾಯಿಯ ಮನೆಯಲ್ಲಿ ತಾಯಿತಂದೆಗಳು ಸಹಜವಾಗಿ ಆಡಿದ ಒಂದು ಚಿಕ್ಕ ಅನಾದರದ ಮಾತಿನಿಂದ ಆಗುವದು. ಅಂತೂ ಸತಿಯ ಜನನದಿಂದ ಅವಳ ಅಕ್ಕಂದಿರಿಗೆ ಒಂದು ಬಗೆಯ ಮತ್ಸರ, ಒಂದು ಬಗೆಯ ಅಭಿಮಾನ ಇವೆರಡೂ ಹುಟ್ಟಿದವು. ಸ್ವಾರ್ಥಪರವಾದ ಮತ್ಸರವು ಸ್ವಜನಸಂಬಂಧವಾದ ಅಭಿಮಾನದೊಡನೆ ಕೂಡಿ ದಾಗ ಕ್ಷುದ್ರ ವ್ಯಕ್ತಿಗಳಲ್ಲಿ ಮತ್ಸರವು ಬೆಳೆಯುವದು; ಉಚ್ಚ ವ್ಯಕ್ತಿಗಳಲ್ಲಿ ಅಭಿ ಮಾನವು ಬೆಳೆಯುವದು. ದಕ್ಷರಾಜನ ಕನ್ಯೆಯರೆಲ್ಲರೂ ಮುಂದೆ ಅಲ್ಪಾವಕಾಶ ದಲ್ಲಿಯೇ ತಮ್ಮ ಸ್ವಾರ್ಥಪರವಾದ ಮತ್ಸರವನ್ನು ತೊರೆದು ತಮ್ಮ ತಂಗಿಯ ಅಲೌಕಿಕತೆಯಿಂದ ಅಭಿಮಾನ ತಾಳಿ ಆನಂದವನ್ನು ಪಡೆದರು.

ಮುಂದೆ ಕೆಲ ದಿನಗಳು ಹೋದಮೇಲೆ ದಕ್ಷರಾಜನ ತಮ್ಮಂದಿರಾದ ನಾರದರು ದಕ್ಷಪುರಿಗೆ ಬಂದರು. ದಕ್ಷರಾಜನು ರಾಜಸಭೆಯಲ್ಲಿರಲಿಲ್ಲ; ಅಂತಃ ಪುರದಲ್ಲಿ ಬಾಲಿಕಾಸತಿಯೊಡನೆ ಬಾಲಕ್ರೀಡೆಗಳನ್ನಾಡುತ್ತ ಕುಳಿತಿದ್ದನು. ನಾರ ದರೂ ನೆಟ್ಟಗೆ ಅಂತಃಪುರಕ್ಕೇ ಹೋದರು. ಅಲ್ಲಿ ಸತಿಯನ್ನು ನೋಡಿದೊಡ ನೆಯೇ ಆನಂದಾಶ್ರುವಿನಿಂದ ಅವರ ಕಣ್ಣುಗಳು ತುಂಬಿಬಂದವು; ಆನಂದ ಪರವಶತೆಯಿಂದ “ಅಮ್ಮಾ!” ಎಂಬ ಪ್ರೇಮೋದ್ಗಾರವು ಒಮ್ಮಿಂದೊಮ್ಮೆ ಹೊರಚಲ್ಲಿತು. ಅವಳನ್ನು ಎತ್ತಿಕೊಳ್ಳಲು ಕೈಗಳು ಹಾತೊರೆಯಹತ್ತಿದವು. ಮುದ್ದಿಡಲು ಮುಖವು ಮುಂದೆ ಬಂದಿತು. ನಾರದರು ತಟ್ಟನೆ ಹೋಗಿ ಸತಿ ಯನ್ನು ಎತ್ತಿ ಮುದ್ದಾಡಿದರು. “ಜಯ! ಭವಾನಿ! ಜಗದಂಬೆ! ಆದ್ಯಶಕ್ತಿ!”

ಎನ್ನುತ್ತ ಪುನಃ ಪುನಃ ಮುದ್ದಿಟ್ಟುಕೊಂಡರು. ಅದನ್ನು ನೋಡಿ ದಕ್ಷರಾಜ ನಿಗೂ ಆತನ ಪತ್ನಿಗೂ ಆಶ್ಚರ್ಯವುಂಟಾಯಿತು. ನಾರದರ ಹೇಳಿಕೆಯಿಂದ ಸತಿಯು ಆದ್ಯಶಕ್ತಿಯು ಅವತಾರವೆಂದು ಅವರು ನಂಬಿದರು. ನಾರದರು ಸತಿ ಯನ್ನು ತೊಡೆಯಮೇಲಿಂದ ಎತ್ತಿ ದಕ್ಷರಾಜನ ಕೈಯಲ್ಲಿ ಕೊಟ್ಟಕೂಡಲೆ ಪುನಃ ಮಾಯಾವೃತವಾದ ಮನಸ್ಸಿಗೆ ಅವಳು ಒಬ್ಬ ಸಾಮಾನ್ಯ ರಾಜಪುತ್ರಿಯೆಂದು ತೋರಹತ್ತಿತು. ನಾರದರ ಕಿವಿಗೆ ಮುಟ್ಟಿದ ಮಾತು ಮೂರು ಲೋಕಕ್ಕೂ ಮುಟ್ಟುವದು ಸಹಜವೇ ಸರಿ. ದಕ್ಷರಾಜನ ಮನೆಯಲ್ಲಿ "**ಆದ್ಯಶಕ್ತಿಯು**" ಸತಿಯು ರೂಪದಿಂದ ಅವತರಿಸಿರುವಳೆಂಬ ಸುದ್ದಿಯು ಕೆಲ ದಿನಗಳಲ್ಲಿಯೇ ಸಕಲ ಲೋಕಗಳಲ್ಲಿಯೂ ಹರಡಿಕೊಂಡಿತು.

## ಎರಡನೆಯ ಪರಿಚ್ಛೇದ.

### ಬಾಲ್ಯ.



ತಂದೆತಾಯಿಗಳ ಅವಿಚಲಪ್ರೇಮಪೂರ್ಣವಾದ ಲಾಲನಪಾಲನ ಗಳಿಂದ ಸತಿಯು ದಿನದಿನಕ್ಕೆ ದೊಡ್ಡವಳಾಗುತ್ತ ನಡೆದಳು. ಮೆಲ್ಲಗೆ ತೊದಲ್ನುಡಿಗಳನ್ನು ಕಲಿತಳು; ಅಂಬೆಗಾಲಿಡಹತ್ತಿದಳು; ನಾಲಿಗೆಯು ಸರಿಯಾಗಿ ತಿರುಗತೊಡಗಿತು; ಅವಳು ಶಂಕರಕೀರ್ತ ನವನ್ನು ತಂದೆತಾಯಿಗಳು ಹೇಳಿಕೊಟ್ಟಂತೆ ಸ್ಪಷ್ಟವಾಗಿ ನುಡಿ ಯುಲು ಸಮರ್ಥಳಾದಳು. ಕಾಲು ಬಲಿಯಿತು; ನೆರೆಹೊರೆಯ ಮಕ್ಕಳ ಸಂಗಡ ಅಂಗಣಕ್ಕೆ ಹೋಗಿ ಆಡಹತ್ತಿದಳು. ದಕ್ಷರಾಜನಿಗೂ ಆತನ ಪತ್ನಿಗೂ ಮಗಳು ಅರೆಗಳಿಗೆ ಕಣ್ಮರೆಯಾದರೂ ಸೈರಿಸದು. ಸತಿಯು ಕಣ್ಮರೆಯಾದರೆ ಜಗತ್ತೇ ಮರೆಯಾದಂತಾಗುವದು. ದಕ್ಷರಾಜನಿಗೆ ರಾಜ್ಯಕಾರ್ಯಭಾರದಲ್ಲಿ ಮೊದಲಿನ ಹಾಗೆ ಆಸಕ್ತಿಯಿಲ್ಲ. ರಾಜ್ಯಭಾರವನ್ನೆಲ್ಲಾ ಮುಖ್ಯಮಂತ್ರಿಗೆ ಒಪ್ಪಿಸಿ ಬಿಟ್ಟಿ ದ್ದನು. ಅಂಥ ಮಹಾಕಾರ್ಯವೇನಾದರೂ ಇದ್ದರೆ ಮಾತ್ರ ಸತಿಯನ್ನು ಎತ್ತಿ

ಕೊಂಡು ರಾಜಸಿಂಹಾಸನದ ಮೇಲೆ ಹೋಗಿ ಕೂಡ್ರುವನು. ಸತಿಯು ತಾಯಿಗೂ ಕೂಡ ಅಷ್ಟೇ ಪ್ರೇಮಪಾತ್ರಳಾಗಿದ್ದಳು. ಮಗಳಿಗೆ ಎಷ್ಟು ಎಣ್ಣೆಯನ್ನು ಹಚ್ಚಿದರೂ ತಾಯಿಗೆ ಕಡಿಮೆಯೆನಿಸುವದು; ಎಷ್ಟು ಎರೆದರೂ ಸಾಲದೆನಿಸುವದು; ಎಷ್ಟು ಹಾಲುಣಿಸಿದರೂ ಮಗಳ ಹಸಿವೆಯು ತಣಿದಂತೆಯೇ ತೋರದು. ಒಟ್ಟಿನ ಮೇಲೆ ಮಗಳಿಗೆ ಮಾಡಿದ ಪ್ರೀತಿ ಪ್ರೇಮ ಆದರಗಳಿಂದ ತಾಯಿಗೆ ತೃಪ್ತಿಯಾಗದು; ಅದಕ್ಕೆ ಆವಳ ಅಂತರಂಗದೊಳಗಿನ ಮಗಳ ಮೇಲಿನ ಅಪಾರವಾದ ವಾತ್ಸಲ್ಯವೇ ಕಾರಣವಾಗಿದ್ದಿತು.

ತಂದೆತಾಯಿಗಳು ಸತಿಯ ವಿಷಯವಾಗಿ ಈ ರೀತಿಯಾದ ವಾತ್ಸಲ್ಯವನ್ನು ತೋರಿಸುತ್ತಿದ್ದರು, ಇಷ್ಟೇ ಅಲ್ಲ; ಅವಳ ಮುಂದಿನ ಆಯುಷ್ಯಮಂದಿರಕ್ಕೆ ತಕ್ಕದ್ದಾದ ಅಸ್ತಿವಾರವನ್ನು ಅವರು ಈ ಬಾಲ್ಯಕಾಲದಲ್ಲಿಯೇ ಹಾಕಿಟ್ಟರು. ಪ್ರತಿದಿನವೂ ಪ್ರಾತಃಕಾಲದಲ್ಲಿ ಎದ್ದು ಮುಖಮಾರ್ಜನಾದಿ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಒಂದರ್ಧತಾಸು ಈಶ್ವರಚಿಂತನವನ್ನು ಭಕ್ತಿಯಿಂದ ಮಾಡಿಸುವರು. ಆ ಮೇಲೆ ತಕ್ಕ ಆಹಾರವನ್ನು ಕೊಟ್ಟು ಆಡಲಿಕ್ಕೆ ಬಿಡುವರು. ಮಧ್ಯಾಹ್ನವಾದ ಕೂಡಲೆ ದಾಸಿಯರು ಕರೆತಂದೊಡನೆಯೇ ಸತಿಯು ಮೈದೊಳೆದು ಮಜ್ಜನಂಗೈಸಿ ಪುನಃ ತಾಸರ್ಧತಾಸು ಈಶ್ವರಚಿಂತನವನ್ನು ಮಾಡಿಸುವರು. ಮಧ್ಯಾಹ್ನದ ಊಟವಾದ ಬಳಿಕ ಪುರಾಣಶ್ರವಣವಾಗುವದು. ಸಾಯಂಕಾಲದ ಸುಮಾರಿಗೆ ಸತಿಯು ಪುನಃ ದಾಸಿಯರೊಡನೆ ಓರಿಗೆಯ ಗೆಳತಿಯರ ಸಂಗಡ ಆಟವಾಡಲು ಹೋಗುವಳು. ತಿರುಗಿ ಬಂದ ಮೇಲೆ ಪ್ರದೋಷಕಾಲದಲ್ಲಿ ಪುನಃ ಈಶ್ವರಾರಾಧನೆಯಾದ ಬಳಿಕ ಊಟಮಾಡಿ ಹಂಸತೂಲಿಕಾತಲ್ಪದಲ್ಲಿ ತಾಯಿಯ ಮಗ್ಗಲಲ್ಲಿ ಸತಿಯು ಮಲಗುವಳು.

ಸತಿಯ ಬುದ್ಧಿಯು ಬಹು ಕುಶಾಗ್ರವಾಗಿದ್ದಿತು. ಬೆಳೆಯ ಸಿರಿಯು ಎಳೆಯತನದಲ್ಲಿಯೇ ಕಂಡುಬರುವದೆಂಬ ಮಾತು ಸತಿಯ ತಂದೆತಾಯಿಗಳಿಗೆ ಪ್ರತಕ್ಷ್ಯ ಅನುಭವಕ್ಕೆ ಬರಹತ್ತಿತು. ಸತಿಗೆ ಪ್ರತಿಯೊಂದು ಮಾತಿನ ವಿಷಯವಾಗಿಯೂ ತರ್ಕ ಬಹಳ. ಯಾವದನ್ನು ಕಂಡರೂ ಇದು ಹೀಗೇಕೆಂದು ತಟ್ಟನೆ ಕೇಳಿಬಿಡುವಳು. ಹೇಳದಿದ್ದರೆ ಅವಳ ಮನಸಿಗೆ ಸಮಾಧಾನವಿಲ್ಲ. ಎಲ್ಲ ಹುಡುಗರ ಹಾಗೆ ಏನಾದರೊಂದು ಅಡ್ಡ ತಿಡ್ಡ ಸಮಾಧಾನವನ್ನು ಹೇಳಹೋದರೆ ಸತಿಗೆ

ಎಂದೆಂದೂ ಒಪ್ಪಿಗೆಯುಂಟಾಗದು. ಒಂದು ದಿನ ದೇವರೆಲ್ಲಿದ್ದಾನೆಂದು ಕೇಳು ವಳು, ಇನ್ನೊಂದುದಿನ ವ್ರತೋಪವಾಸಗಳಿಂದ ಫಲವೇನೆಂದು ಕೇಳುವಳು; ಮತ್ತೊಂದುದಿನ ಹಿಂದಿನ ಜನ್ಮದಲ್ಲಿ ತಾನು ಯಾರಾಗಿದ್ದೆನೆಂದು ಕೇಳುವಳು ಐದು ವರುಷದ ಹಸುಗೂಸಿಗೆ ಈ ಮಾತುಗಳನ್ನೆಲ್ಲಾ ತಿಳಿಸಿ ಹೇಳುವದೆಂತು? ದಕ್ಷರಾಜನೂ ರಾಣಿಯೂ ಬಲು ಪೇಚಾಡುವರು. ಅವರು ಉತ್ತರ ಹೇಳಹೋ ದರೆ ತನ್ನ ಮನಸ್ಸಿಗೆ ಸಮಾಧಾನವಾಗುವವರೆಗೂ ಸತಿಯ ಪ್ರಶ್ನಮಾಲಿಕೆಯು ಕೊನೆಮುಟ್ಟದು. ಸತಿಯದು ಇನ್ನೊಂದು ವಿಶೇಷ ಗುಣ; ಅವಳು ಬಲು ಅಭಿ ಮಾನಿ. ತನ್ನ ಮನಸ್ಸಿಗೆ ವಿರುದ್ಧವಾಗಿ ತಂದೆತಾಯಿಗಳೇ ಆಗಲಿ, ಇನ್ನಾರೇ ಆಗಲಿ, ಒಂದು ಶಬ್ದವನ್ನು ಆಡಿದರೂ ಅವಳಿಗೆ ಸಹನವಾಗದು. ಅಭಿಮಾನಕ್ಕೆ ಎಳ್ಳಷ್ಟು ಭಂಗಬಂದರೂ ತಟ್ಟನೆ ಅವಳ ಕಣ್ಣಲ್ಲಿ ನೀರೇ ಬರುವದು. ಸತಿಯು ರಾತ್ರಿಯಲ್ಲಿ ತಾಯಿಯ ಮಗ್ಗಲಲ್ಲಿ ಮಲಗಿದಾಗ ಅವಳು ತನಗೆ ಕಥೆಯನ್ನು ಹೇಳಬೇಕೆಂದು ಕೇಳುವಳು. ಅವಳಿಗೆ ಅಂಥಿಂಥ ಕಾಗೆಗುಬ್ಬಿಗಳ ಕಥೆಯನ್ನು ಹೇಳಿದರೆ ನಡೆಯದು. ಪುರಾಣ ಪುಣ್ಯ ಕಥೆಗಳ ಮೇಲೆ ಅವಳ ಪ್ರೀತಿಬಹಳ. ಮಧ್ಯರಾತ್ರಿಯು ಮೀರಿದರೂ ಸತಿಗೆ ಕಥೆಯನ್ನು ಕೇಳುವ ಆತುರತೆಯು ಕಡಿ ಮೆಯಾಗದು. ಕಡೆಗೆ ತಾಯಿಯು ದಣಿದು ಮಲಗಿದಳೆಂದರೆ ನಿರುಪಾಯಳಾಗಿ ಮಲಗುವಳು. ಸತಿಯ ಸ್ಮರಣಶಕ್ತಿಯು ವಿಶೇಷ ಪ್ರಕಾರದ್ದಾಗಿದ್ದಿತು. ಇಂದು ಹೇಳಿದ ಒಂದು ಮಾತು ಮುಂದೆ ಮೂರು ವರುಷಗಳ ಮೇಲೆಯೂ ಹಾಗೆಯೇ ನೆನಪುಳಿಯುವದು. ತಾಯಿಯು ಒಮ್ಮೆ ಹೇಳಿದ ಕಥೆಯನ್ನು ಸತಿಯು ಕೊನೆ ಯವರೆಗೂ ನೆನಪಿಟ್ಟುಕೊಳ್ಳುವಳು.

ಸತಿಯಲ್ಲಿ ಮತ್ತೊಂದು ವಿಶೇಷಗುಣವಿದ್ದಿತು. ಅವಳು ತಂದೆತಾಯಿಗಳ ಮಾತನ್ನು ಎಂದೆಂದೂ ಮೀರಿನಡೆಯಳು. ಅವರು ಒಮ್ಮೆ ಉಪದೇಶಿಸಿದ ಮಾತನ್ನು ತಾನು ಮರೆಯಳು, ಇಷ್ಟೇ ಅಲ್ಲ; ತಂದೆತಾಯಿಗಳು ಮೋಹದಿಂದ ಮರೆತರೆ ತಿರುಗಿ ಅವರಿಗೇ ಅದನ್ನು ಉಪದೇಶ ಮಾಡುವಳು. ಆದರೆ ಒಂದು ಮಾತಿನಲ್ಲಿ ಮಾತ್ರ ಅವಳು ಯಾರನ್ನೂ ಕೇಳಳು. ದೀನದರಿದ್ರರನ್ನು ಕಂಡರೆ ಅವಳ ಕಣ್ಣುಗಳಿಂದ ನೀರು ಸುರಿಯುಹತ್ತುವದು; ತಂದೆತಾಯಿಗಳು ಪ್ರೇಮದಿಂದ ಅಲಂಕರಿಸಿದ ಅಲಂಕಾರಗಳನ್ನು ಅವರಿಗೆ ದಾನಮಾಡಿ ಬಿಡುವಳು. ಪ್ರಾಪಂಚಿ ಕರಾದ ದಕ್ಷಬ್ರಹ್ಮನಿಗೂ ಆತನ ಪತ್ನಿಗೂ ಮಗಳು ವಸ್ತ್ರಾಲಂಕಾರಗಳ ಮೇಲೆ

ತೋರಿಸುವ ಅಪ್ರೀತಿಯಿಂದಲೂ ಅವಳು ಉದಾರಹಸ್ತದಿಂದ ಮಾಡುವ ನಿರ ಪೇಕ್ಷಬುದ್ಧಿಯ ದಾನದಿಂದಲೂ ತುಸು ಬೇಸರವಾಗುವದು. ಆದರೆ ಆ ಬೇಸ ರವು ಸತಿಯು ದೃಷ್ಟಿಯ ಮರೆಯಲ್ಲಿರುವಾಗ ಮಾತ್ರ; ಅವಳು ಎದುರಿಗೆ ಬಂದೊ ಡನೇ ಅವರ ಮನಸ್ಸಿನ ಸ್ಥಿತಿಯು ಒಮ್ಮಿಂದೊಮ್ಮೆ ಬದಲಾಗಿ ಹೋಗುವದು. ಕೇವಲ ಆನಂದ, ಆನಂದವೊಂದೇ ಅಲ್ಲದೆ ಇನ್ನಾವಭಾವನೆಯೂ ಅವರ ಹೃದ ಯದಲ್ಲಿ ಸತಿಯ ಮುಖಾವಲೋಕನದಿಂದ ಹುಟ್ಟದು.

ಕ್ರಮಕ್ರಮವಾಗಿ ಸತಿಯು ದೊಡ್ಡವಳಾಗುತ್ತ ನಡೆದಳು. ತಂದೆತಾಯಿ ಗಳ ಮನೋವೃತ್ತಿಯೂ ಅದರೊಡನೆ ಬದಲಾಗುತ್ತ ಬಂದಿತು. ಮೊದಲು ಅವರಿಗೆ ಸತಿಯನ್ನು ನೋಡಿದರೆ ಆನಂದವಷ್ಟೇ ಆಗುತ್ತಿತ್ತು. ಈಗ ಆ ಆನಂದ ಭಾವನೆಯು ಕ್ರಮವಾಗಿ ಭಕ್ತಿಭಾವನೆಯ ಸ್ವರೂಪಕ್ಕೆ ಬರಹತ್ತಿತು. ದಕ್ಷರಾ ಜನು ಸತಿಗೆ ಸತೀಪದಕ್ಕೆ ತಕ್ಕ ಶಿಕ್ಷಣವನ್ನು ಕೊಡಲು ಆರಂಭಿಸಿದನು. ಓದು ಬರಹಗಳನ್ನು ತಾನೇ ಕಲಿಸಿದನು. ಕಲಿಸುವಾಗ ದಕ್ಷನಿಗೆ ಅವಳ ಅಪ್ರತಿಮ ಜಾಣ್ಮೆಯನ್ನು ನೋಡಿ ಪರಮಾನಂದವಾಗುವದು. ದಕ್ಷರಾಜನು ಒಮ್ಮೆ ಪುರಾ ಣವನ್ನು ಓದಿತೋರಿಸುವನು; ಒಮ್ಮೆ ಅದಕ್ಕೆ ವ್ಯಾಖ್ಯಾನಗಳನ್ನು ಹೇಳುವನು. ವ್ಯಾಖ್ಯಾನಗಳನ್ನು ಮೊದಮೊದಲು ಸತಿಯು ಸುಮ್ಮನೆ ಕೂತು ಕೇಳುತ್ತಿದ್ದಳು. ಮುಂದೆ ಬರಬರುತ್ತ ಆ ಸ್ಥಿತಿಯು ಉಳಿಯಲಿಲ್ಲ. ತಂದೆಯ ವ್ಯಾಖ್ಯಾನಕ್ಕೆ ಮಗಳು ಪ್ರತ್ಯಾಖ್ಯಾನವನ್ನು ಮಾಡುವಳು. ತಂದೆಯು ಒಂದು ಶ್ಲೋಕಕ್ಕೆ ಒಂದರ್ಥವನ್ನು ಹೇಳಿದರೆ ಮಗಳು ಮತ್ತೊಂದರ್ಥವನ್ನು ಸೂಚಿಸುವಳು. ಇದನ್ನು ನೋಡಿ ದಕ್ಷರಾಜನಿಗೆ ಆಶ್ಚರ್ಯವಾಗುವದು.

ಭಿಕ್ಷುಕರಿಗೆ ದಾನವನ್ನು ನೀಡುವದರಿಂದಲೂ ಕಂಗಾಲರಿಗೆ ಅನ್ನವಸ್ತ್ರಗ ಳನ್ನು ಕೊಡುವದರಿಂದಲೂ ಸತಿಗೆ ಬಲು ಆನಂದವಾಗುವದು. ಸಾಧುಸನ್ಯಾಸಿ ಗಳನ್ನು ಕಂಡರೆ ಅವಳ ಆನಂದಕ್ಕೆ ಮೇರೆಯುಳಿಯದು. ಅವಳು ಎಷ್ಟು ಆದರ ದಿಂದಲೂ ಪ್ರೀತಿಯಿಂದಲೂ ಅವರ ಸೇವಾಶುಶ್ರೂಷೆಗಳನ್ನು ಮಾಡುವಳೋ ಎಷ್ಟು ಆದರಪ್ರೀತಿಗಳಿಂದ ಅವರ ಊಟಉಣಿಸುಗಳನ್ನು ಅನುಗೊಳಿಸುವಳೋ ಅಷ್ಟೇ ಆದರಪ್ರೀತಿಗಳಿಂದ ಅವರು ಹೇಳುವ ಭಗವಂತನ ನಾಮಕೀರ್ತನ ಗುಣಕೀರ್ತನಗಳನ್ನು ಕೇಳುವಳು; ಆನಂದಪಡುವಳು. ಸನ್ಯಾಸಿಗಳಿಗೆ ಹೊತ್ತು

ಹೊತ್ತಿಗೆ ಅನ್ನಪಾನಗಳೂ ಅರಿವೆಅಂಚಡಿಗಳೂ ದೊರೆಯುವದಿಲ್ಲವೆಂಬದನ್ನು ಕೇಳಿ ಸತಿಯ ಮನಸಿನಲ್ಲಿ ಕಳವಳವುಂಟಾಗುವದು. ಸತಿಯು ಸಾಧುಸನ್ಯಾಸಿಗಳಿಗೆ ಸಂಸಾರವನ್ನು ಬಿಡುವದರಲ್ಲಿ ಏನೂ ಅರ್ಥವಿಲ್ಲೆಂತಲೂ ಸಂಸಾರದಲ್ಲಿಯೇ ಇದ್ದುಕೊಂಡು ಈಶ್ವರನಾಮಸಂಕೀರ್ತನವನ್ನು ಮಾಡಿ ಆತನ ಗುಣಗಳಾದ ಸದ್ಧರ್ಮವರ್ತನ, ಪರೋಪಕಾರ, ಸ್ವಕರ್ತವ್ಯತತ್ಪರತೆ ಮುಂತಾದ ಗುಣಗಳನ್ನು ಅನುಕರಿಸಿ ನಡೆದು ಮೋಕ್ಷವನ್ನು ಪಡೆಯಬೇಕೆಂತಲೂ ಉಪದೇಶಿಸುವಳು. ಸತಿಯ ಉಪದೇಶವನ್ನು ಕೇಳಿ ಅವರಿಗೂ ಆಶ್ಚರ್ಯವಾಗುವದು; ಆನಂದವಾಗುವದು. ಆದ್ದರಿಂದಲೇ ಸತಿಯಿರುವ ದಕ್ಷಪುರಿಯನ್ನು ಬಿಟ್ಟು ಹೋಗುವವೆಂದರೆ ಅವರಿಗೆ ಈಶ್ವರ ಸಾನ್ನಿಧ್ಯದಿಂದ ತೊಲಗಿ ಹೋಗುವಂತೆ ತೋರುವದು; ಕಣ್ಣುಗಳಿಂದ ನೀರು ಸುರಿಯುವದು.

ದಕ್ಷರಾಜನೂ ಆತನ ಪತ್ನಿಯೂ ಮಗಳನ್ನು ಲೋಕಕ್ಕೆ ಆದರ್ಶರಮಣಿಯೂ ಅನುಕರಣೀಯಳಾದ ಗೃಹಿಣಿಯೂ ಆಗುವಂತೆ ಮಾಡಲು ಯತ್ನಿಸುತ್ತಿದ್ದರು. ರಮಣಿಯರ ಕರ್ತವ್ಯ, ಗೃಹಿಣಿಯರ ಪತಿಭಕ್ತಿ ಗುರುಹಿರಿಯರ ಸೇವಾಶುಶ್ರೂಷೆ ಇವುಗಳನ್ನೂ ಅತಿಥಿಅಭ್ಯಾಗತರ ಆದರ, ಉಪಚಾರಗಳನ್ನೂ ಯಾವ ರೀತಿಯಾಗಿ ಮಾಡಬೇಕೆಂಬದನ್ನು ದಕ್ಷಪತ್ನಿಯು ಮಗಳಿಗೆ ಆಗಾಗ ಉಪದೇಶಿಸುವಳು; ಅಡಿಗಡಿಗೆ ನಡೆದು ತೋರಿಸುವಳು; ಮಗಳಿಂದ ಅದರಂತೆ ಮಾಡಿಸಿಕೊಂಡು ತಪ್ಪುತಡೆಗಳನ್ನು ತಿದ್ದಿಕೊಡುವಳು.

ಈ ರೀತಿಯಾದ ತಂದೆತಾಯಿಗಳ ಲಾಲನ ಪಾಲನ ಶಿಕ್ಷಣಗಳೊಡನೆ ಸತಿಯ ಬಾಲ್ಯಕಾಲವು ಕಳೆಯಿತು; ಕಿಶೋರಾವಸ್ಥೆಯಲ್ಲಿ ಅವಳು ಕಾಲಿಟ್ಟಳು. ಆಟಪಾಟಗಳ ಮೇಲಿನ ಅವಳ ಪ್ರೀತಿಯು ಕಡಿಮೆಯಾಯಿತು. ಬಾಲ್ಯದ ಬೈಲಿನಲ್ಲಿ ವಿಹರಿಸುವಾಗಿನ ಅವಳ ಚಪಲತೆಯು ಕುಂದಿ ಆ ಸ್ಥಳದಲ್ಲಿ ಧೀರತೆ ಲಜ್ಜೆಗಳು ಉದ್ಭವಿಸಿದವು. ಸ್ವಭಾವಸಹಜವಾದ ಲಜ್ಜೆಯು ಕುಲಸ್ತ್ರೀಯರಿಗೆ ನಿಜವಾದ ಸೌಂದರ್ಯದ ಆವರಣದಂತಿರುವದು. ಇಂದಿನವರೆಗೆ ಸತಿಯನ್ನು ನೋಡಿದಾಗ ಹುಟ್ಟುತ್ತಿದ್ದ ವಾತ್ಸಲ್ಯಭಾವನೆಯು ಈಗ ಭಕ್ತಿರೂಪವಾಗಿ ಪರಿಣಮಿಸಿತು. ಸ್ವಯಂ ದಕ್ಷಪತ್ನಿಗೇ ತಾನು ಸತಿಯ ತಾಯಿಯೋ ಸತಿಯೇ ತನ್ನ ತಾಯಿಯೋ ಎಂಬ ಭಾವನೆಯು ಒಮ್ಮೊಮ್ಮೆ ಹುಟ್ಟುವದು. ಅಂದರೆ ತಾನು ಸತಿಯನ್ನು ಹೆಚ್ಚು ಪ್ರೀತಿಸುವೆನೋ ಅಥವಾ ಸತಿಯೇ ತನ್ನನ್ನು ಹೆಚ್ಚು

ಮಮತೆಯಿಂದ ನೋಡಿಕೊಳ್ಳುವಳೋ ಎಂಬ ಸಂಶಯವು ಅವಳ ಹೃದಯದಲ್ಲಿ ಉದಯಿಸುವದು.

ದಕ್ಷರಾಜನೂ ಸತಿಯ ಮಾತೃಸ್ನೇಹವನ್ನು ನೋಡಿ ಆನಂದಪರವಶನಾದನು. ಆತನು ಬ್ರಹ್ಮನ ಮಾನಸಪುತ್ರನು; ಅದ್ದರಿಂದ ಅವನಿಗೆ ಮಾತೃಸ್ನೇಹದ ಅನುಭವವಿರಲಿಲ್ಲ. ಈಗ ಸತಿಯು ತನ್ನಲ್ಲಿ ತೋರಿಸುವ ಅತುಲವೂ ಅನುಪಮವೂ ಆದ ಮಾತೃಸ್ನೇಹವನ್ನು ನೋಡಿ ಅವನಿಗಾದ ಆನಂದವನ್ನು ಹೇಳಲಾಸಲ್ಲ. ದಕ್ಷರಾಜನು ಮಹಾ ಅಭಿಮಾನಿಯೂ ಕ್ರೂರನೂ ಮಹತ್ವಾಕಾಂಕ್ಷಿಯೂ ಆಗಿದ್ದನು. ಅದ್ದರಿಂದ ಅವನ ಮನಸಿನಲ್ಲಿ ಯಾವಾಗಲೂ ಶಾಂತಿಯಿರುತ್ತಿರಲಿಲ್ಲ. ಆದರೆ ಸತಿಯ ಸಹವಾಸದಿಂದ ಅವನು ಈಗ ನಿರಭಿಮಾನಿಯೂ ಕೋಮಲಹೃದಯಿಯೂ ಸದಾತೃಪ್ತನೂ ಆಗಿ ತೋರಹತ್ತಿದನು. ಆದರೆ ಹುಟ್ಟುಗುಣವು ಸುಟ್ಟರೂ ಬಿಡದೆಂಬ ಮಾತು ಸುಳ್ಳಲ್ಲ. ಈ ಮಾತಿನ ಅನುಭವವು ಮುಂದೆ ಪ್ರತ್ಯಕ್ಷವಾಗುವದು.

ಸತಿಯು ತಂದೆತಾಯಿಗಳಿಗಷ್ಟೇ ಮಾತ್ರವೇ ಅತುಲ ಮಮತೆಯನ್ನು ತೋರಿಸುತ್ತಿದ್ದಳೆಂತಲ್ಲ. ಅವಳು ಸಕಲರನ್ನೂ ಸಮದೃಷ್ಟಿಯಿಂದ ನೋಡುವಳು. ಜಗನ್ಮಾತೆಯಾದ ಸತಿಗೆ ಜಗತ್ತಿನ ಮೇಲೆಯೇ ಅತುಲವಾದ ಮಮತೆ. ಅರಮನೆಯ ದಾಸದಾಸಿಯರನ್ನೂ ರಾಜನ ಮಂತ್ರಿಪರಿಜನರನ್ನೂ ಸಕಲ ಪ್ರಜೆಗಳನ್ನೂ ಸತಿಯು ಸಮಭಾವದಿಂದ ನೋಡುವಳು. ಯಾರಿಗೆ ಯಾವ ತರದ ಆಪತ್ತು ಒದಗಿದರೂ ಅವರಿಗೆ ಕೈಗೊಟ್ಟು ಉದ್ಧರಿಸುವಳು. ದರಿದ್ರರನ್ನೂ ವ್ಯಂಗರನ್ನೂ ಕಂಡರೆ ಕಣ್ಣೀರು ಸುರಿಸುವಳು. ವ್ಯಾಧಿಗ್ರಸ್ತರಾದವರಿಗೆ ಔಷಧೋಪಚಾರಗಳನ್ನು ತಾನೇ ನಡಿಸುವಳು. ಪಶುಪಕ್ಷಿ ಕ್ರಿಮಿಕೀಟಕಗಳ ಮೇಲೆಯೂ ಅವಳ ಪ್ರೀತಿಯು ಕಡಿಮೆತರವಾಗಿರಲಿಲ್ಲ. ಅಣು-ರೇಣು-ತೃಣಕಾಷ್ಟಗಳನ್ನೂ ಪಶುಪಕ್ಷಿ ಕ್ರಿಮಿಕೀಟಕಗಳನ್ನೂ ಮಾನವ-ದಾನವ-ದೇವತೆಗಳನ್ನೂ ಸತಿಯು ಸಮಭಾವದಿಂದ ನೋಡಿ ಅವರವರಿಗೆ ಅನುರೂಪವಾದ ಸಹಾಯಸಂಪತ್ತಿಯನ್ನು ನೀಡುವಳು. ತಾಯೇ! ಜಗದಂಬೇ! ಈ ಕಲಿಕಾಲದಲ್ಲೊಮ್ಮೆ ಅವತರಿಸಬಾರದೇನಮ್ಮಾ!



## ಮೂರನೆಯ ಪರಿಚ್ಛೇದ.



# ಶಿವದರ್ಶನ ರಹಸ್ಯ.



ವಸಂತರಾಜನ ಆಗಮನದಿಂದ ಹಿಮಾಚಲದಲ್ಲಿ ವಿಲಕ್ಷಣಪರಿವರ್ತನೆಯುಂಟಾಗಿದ್ದಿತು. ಎಲೆಗಳೆದು ಬರಲಾಗಿ ನಿಂತ ಗಿಡಗಳು ಚಿಗುರೊಡೆದು ಎಲೆ ಬಲಿತು ಮನೋಹರವಾಗಿ ತೋರುತ್ತಿದ್ದವು. ಹಿಮಾಚ್ಛಾದಿತವಾಗಿ ಸತ್ತುಹೋಗಿದ್ದ ತೃಣಸಂಕುಲಗಳು ಬರ್ಫ (ನೀರ್ಗಡ್ಡೆ) ವು ಕರಗಿಹೋಗಲು ಪುನಃ ತಲೆಯೆತ್ತಿ ಚಿಗುರಿ ಹಸುರಬಣ್ಣದಿಂದ ಭೂಭಾಗವನ್ನು ಅಲಂಕರಿಸಿ ಭೂದೇವತೆಯ ಹಸುರುಡಿಗೆಯಂತೆ ತೋರುತ್ತಿದ್ದವು. ಹೆಪ್ಪುಗಟ್ಟಿದ ಹಿಮನದಿಗಳು ಕರಗಿ ನೀರಾಗಿ ಸಣ್ಣ ದೊಡ್ಡ ಶಾಖೆಗಳನ್ನು ಕೂಡಿಕೊಂಡು ದೊಡ್ಡ ದೊಡ್ಡ ನದಿಗಳಾಗಿ ಹರಿದು ಗಂಗಾ, ಯಮುನಾ, ಬ್ರಹ್ಮಪುತ್ರಾ, ಸಿಂಧೂನದಿಗಳಿಗೆ ಕೂಡಹತ್ತಿದ್ದರಿಂದ ಆ ನದಿಗಳಿಗೆ ಮಹಾಪೂರವು ಬರಹತ್ತಿತು. ಕ್ರಿಮಿಕೀಟಕ ಪಶುಪಕ್ಷಿಗಳಿಗೆಲ್ಲಾ ಆನಂದದ ದಿವಸವೊದಗಿತ್ತು. ಮನುಷ್ಯರಿಗಂತೂ ಅತುಲ ಆನಂದವಾಗಹತ್ತಿತ್ತು. ದಕ್ಷಪುರಿಯಲ್ಲಿ ಈ ದಿನ ಮಹೋತ್ಸವ; ದಾಕ್ಷಾಯಿಣಿಯು ಶನಿಪ್ರದೋಷದ ವ್ರತವನ್ನು ಆರಂಭಿಸಿದ್ದಳು. ಪ್ರಜೆಗಳೆಲ್ಲರೂ ತಂಡತಂಡವಾಗಿ ಬಂದು ಅರಮನೆಯಲ್ಲಿ ಕೂಡಿದ್ದರು. ಪ್ರದೋಷಕಾಲವು ಸಮೀಪಿಸಿತು. ಅರಮನೆಯಲ್ಲಿ ಶಿವಪೂಜೆಗೆ ಆರಂಭವಾಯಿತು. ಬ್ರಾಹ್ಮಣರು ವೇದಘೋಷಮಾಡುತ್ತಿದ್ದರು. ಸ್ವಯಂ ದಾಕ್ಷಾಯಿಣಿಯು ರುದ್ರಾಕ್ಷಮಾಲೆಗಳನ್ನು ಧರಿಸಿ ಋಷಿವೇಷದಿಂದ ಈಶ್ವರವಿಗ್ರಹದ ಮುಂದೆ ಕುಳಿತು ಪೂಜೆಯನ್ನು ಮಾಡುತ್ತಿದ್ದಳು. ದಕ್ಷರಾಜನೂ ಆತನ ಪತ್ನಿಯೂ ಬಳಿಯಲ್ಲಿ ಕೈಜೋಡಿಸಿಕೊಂಡು ಕುಳಿತಿದ್ದರು. ಷೋಡಶೋಪಚಾರಗಳಿಂದ ಪೂಜೆಯು ಸಾಂಗವಾದಬಳಿಕ ದಾಕ್ಷಾಯಿಣಿಯು ಶಿವವಿಗ್ರಹವನ್ನು ಕೆಲಕಾಲ ನಿಂತು

ನಿರೀಕ್ಷಿಸಿ ನೋಡಿ ಕಣ್ಣುಗಳನ್ನು ಮುಚ್ಚಿಕೊಂಡು ಬದ್ಧಾಂಜಲಿಯಾಗಿ ಕುಳಿತು ಬಳಿಕ ಸಾಷ್ಟಾಂಗವೆರಗಿ ಪ್ರಸಾದವನ್ನು ಸ್ವೀಕರಿಸಿ ಮುಡಿಯಲ್ಲಿಡಲು ಕೈಯೆತ್ತು ವಷ್ಟರಲ್ಲಿ ಆಕಾಶದಲ್ಲಿ ಪ್ರತಿಧ್ವನಿಯಾಯಿತು. "ಜಯ! ಶಂಕರ!" "ಜಯ! ಶಂಕರ!" ದಾಕ್ಷಾಯಿಣಿಯು ಪ್ರಸಾದವನ್ನು ಸ್ವೀಕರಿಸಿ ತಂದೆತಾಯಿಗಳಿಗೂ ಅರ್ಪಿಸಿ ಅತಿಥಿ ನಿರೀಕ್ಷಣೆಗಾಗಿ ಹೊರಗೆಬಂದಳು. ಅತಿಥಿಸತ್ಕಾರವು ಅವಶ್ಯ ಕರ್ತವ್ಯವೆಂಬದನ್ನು ದಾಕ್ಷಾಯಿಣಿಯು ಅರಿತು ನಡೆಯುತ್ತಿದ್ದಳು.

ದಾಕ್ಷಾಯಿಣಿಯು ಅತಿಥಿನಿರೀಕ್ಷಣೆಗಾಗಿ ಹೊರಗೆ ಬರುವಷ್ಟರಲ್ಲಿ ಹಣೆ ಯಲ್ಲಿ ವಿಭೂತಿಯನ್ನೂ ಕೊರಳಲ್ಲಿ ರುದ್ರಾಕ್ಷಮಾಲೆಗಳನ್ನು ಧರಿಸಿಕೊಂಡು ಶಿವ ನಾಮಸಂಕೀರ್ತನೆಯನ್ನು ಮಾಡುತ್ತಿರುವ ಯೋಗಿನಿಯೊಬ್ಬಳು ಅರಮನೆಯ ಮಹಾದ್ವಾರವನ್ನು ದಾಟಿ ಒಳಗೆ ಬರುತ್ತಿದ್ದಳು. ದಾಕ್ಷಾಯಿಣಿಯ ಅಪ್ಪಣೆ ಯಿಂದ ಅರಮನೆಗೆ ಬರುವ ವಿರಕ್ತರನ್ನು ದ್ವಾರಪಾಲಕರು ಯಾವ ಕಾರಣ ದಿಂದಲೂ ತಡೆಯುತ್ತಿರಲಿಲ್ಲ. ಅದರಲ್ಲಿಯೂ ಇವಳು ಸ್ತ್ರೀಯುಳು, ಅದರಿಂದ ಯೋಗಿನಿಗೆ ಅರಮನೆಯನ್ನು ಪ್ರವೇಶಿಸಲು ಏನೂ ತೊಂದರೆಯಿರಲಿಲ್ಲ. ಅವಳು ನೆಟ್ಟಗೆ ಒಳಗೆ ಬಂದಳು. ಯೋಗಿನಿಯು ವೇಷದಿಂದೊಪ್ಪುತ್ತಿರುವ ಅತಿಥಿ ಯನ್ನು ನೋಡಿ ಸತಿಗೆ ಅತ್ಯಾನಂದವಾಯಿತು. ಅವಳು ಯೋಗಿನಿಯನ್ನು ಎದುರ್ಗೊಂಡು ಕರೆದೊಯ್ದು ಯೋಗ್ಯವಾಗಿ ಸತ್ಕರಿಸಿದಳು. ಸತಿಯು ಸತ್ಕಾರ, ಆದರ, ಉಪಚಾರ ಇವುಗಳಿಗೂ ಅವಳ ಅನುಪಮ ವಿವೇಕ ಸುಜ್ಞಾನಗಳಿಗೂ ಮೋಹಿತಳಾದ ಯೋಗಿನಿಯು ಅಂದಿನಿಂದ ದಕ್ಷಪುರಿಯಲ್ಲಿಯೇ ಉಳಿಯಹತ್ತಿ ದಳು. ಅವಳು ಸತಿಯನ್ನು ತಂಗಿಯೆಂದು ಕರೆಯುವಳು. ಅವಳ ತಂದೆತಾಯಿ ಗಳೇ ತನ್ನ ತಂದೆತಾಯಿಗಳೆಂಬ ಭಾವನೆಯಿಂದ ನಡೆದುಕೊಳ್ಳುವಳು. ಸತಿಯು ವಿಷಯುವಾಗಿ ಅವಳಿಗೆ ಅಪ್ರತಿಮಪ್ರೀತಿ; ಅವಳನ್ನು ಅರೆಗಳಿಗೆ ಅಗಲಿ ಇರ ಲಾರಳು. ಸತಿಗೂ ಯೋಗಿನಿಯ ಮೇಲೆ ಸಂಪೂರ್ಣಭಕ್ತಿ; ಅವಳ ಹೇಳಿಕೆ ಯನ್ನು ಅಕ್ಷರಶಃ ಅನುಸರಿಸಿ ನಡೆಯುವಳು. ಯೋಗಿನಿಯು ಸತಿಗೆ ಮೆಲ್ಲಗೆ ತನ್ನ ಮಾರ್ಗವನ್ನು ತೋರಿಸಹತ್ತಿದಳು.

ಯೋಗಿನಿಯು ಪ್ರತಿನಿತ್ಯ ಬ್ರಾಹ್ಮೀಮುಹೂರ್ತದಲ್ಲಿ ಎದ್ದು ಪ್ರಾತರ್ವಿಧಿ ಗಳನ್ನು ತೀರಿಸಿಕೊಂಡು ಬಳಿಯಲ್ಲಿಯೇ ಪ್ರವಹಿಸುವ ನೀಲಧಾರೆಯಲ್ಲಿ ಮಿಂದು ಮಾಡಿಯುಟ್ಟು ಮೇಲೆ ಬಂದು ಒಂದು ಬಿಲ್ವವೃಕ್ಷದ ಕೆಳಗೆ ಕುಳಿತು ಶಿವಪೂಜೆ

ಯನ್ನು ಆರಂಭಿಸುವಳು. ಅವಳು "ಹರ ಹರ ಮಹಾದೇವ!" ಎಂದು ಧ್ಯಾನಾಸಕ್ತಳಾಗಿ ಅಂತರಾತ್ಮನೊಡನೆ ಈಶ್ವರಸಾನ್ನಿಧ್ಯವನ್ನು ಪಡೆಯುತ್ತಿರುವದನ್ನೂ ಆ ಸಮಯದ ಅವಳ ಸಂಪೂರ್ಣ ಶಾಂತಿಯುಕ್ತವಾದ ಮುಖಲಕ್ಷಣವನ್ನೂ ಸತಿಯು ಒಂದೆರಡು ದಿನ ನೋಡಿದಳು. ಮೂರನೆಯ ದಿನವೇ ಯೋಗಿನಿಗೆ ಈಶ್ವರಧ್ಯಾನದಿಂದುಂಟಾಗುವ ಪರಮಾನಂದದ ಮೇಲೆ ಸತಿಗೆ ಪ್ರೀತಿಯುಂಟಾಯಿತು. ಅವಳು ಯೋಗಿನಿಯನ್ನು ತನಗೂ ಈ ಯೋಗಮಾರ್ಗವನ್ನು ಉಪದೇಶಿಸಬೇಕೆಂದು ಬೇಡಿಕೊಂಡಳು.

ಯೋಗಿನಿಯು ಸತಿಯು ತೋರಿಸುವ ಅಪ್ರತಿಮ ಪ್ರೀತಿಯನ್ನೂ ಆಸಕ್ತಿಯನ್ನೂ ನೋಡಿ ಅವಳಿಗೆ ಯೋಗಮಾರ್ಗವನ್ನು ಉಪದೇಶಿಸುವದನ್ನು ನಿರ್ಣಯಿಸಿದಳು. ಕೆಲದಿನಗಳಲ್ಲಿಯೇ ಸತಿಯೂ ಪ್ರತಿಯೋಗಿನಿಯಾದಳು. ಅಕ್ಕತಂಗಿಯರಿಬ್ಬರೂ ಸದಾ ಈಶ್ವರಧ್ಯಾನದಲ್ಲಿ ನಿರತರಾಗಿರುವದನ್ನು ನೋಡಿ ದಕ್ಷರಾಜನಿಗೂ ಆತನ ಪತ್ನಿಗೂ ಒಮ್ಮೆ ಆನಂದವೆನಿಸುವದು; ಒಮ್ಮೆ ವಿಷಾದವೆನಿಸುವದು. ಸತಿಯು ಸನ್ಮಾರ್ಗನಿರತಳಾಗಿರುವದು ಅವರ ಆನಂದದ ಕಾರಣವಾಗಿತ್ತು. ಆದರೆ ಈ ತರದ ಪೂರ್ವವಯಸ್ಸಿನಲ್ಲಿಯೇ ಅವಳು ತೋರಿಸುವ ಪ್ರಾಪಂಚಿಕ ವಿಷಯದ ಅನಾದರದಿಂದ ಅವರಿಗೆ ಬೇಸರವುಂಟಾಗುವದು. ಹೇಗಿದ್ದರೂ ಸತಿಯ ಮೇಲಿನ ಅವರ ಅಂತರಂಗದ ಮೋಹಪಟಲವು ದಿನದಿನಕ್ಕೆ ತೆಳ್ಳಗಾಗುತ್ತ ನಡೆಯಿತು; ಸರಿ. ಅವರಿಗೆ ಈಗ ಸತಿಯ ಪಾಲನಪೋಷಣಗಳ ಭಾರವುಳಿಯಲಿಲ್ಲ. ಯೋಗಿನಿಯು ಆ ಭಾರವನ್ನು ಸಂಪೂರ್ಣವಾಗಿ ವಹಿಸಿಕೊಂಡು ಬಿಟ್ಟಿದ್ದಳು.

ಸತಿಯು ಯೋಗಿನಿಯ ಮುಖದಿಂದ ಪ್ರತಿನಿತ್ಯವೂ ಶಿವಮಹಿಮೆಯನ್ನು ಕೇಳುವಳು. ಯೋಗಿನಿಯು ಉಪದೇಶಿಸುವ ಶಿವಮಹಿಮೆಯನ್ನು ಕೇಳಿ ಸತಿಗೆ ಪರಮಾನಂದವಾಗುವದು. ಯೋಗಿನಿಯು ಉಪದೇಶಿಸುತ್ತಿದ್ದುದೇನಂದರೆ:—

"ಶಿವನೇ ಸರ್ವೋತ್ತಮನು; ಸರ್ವದೇವತೆಗಳ ಆದಿಪುರುಷನು. ಆದರಿಂದಲೇ ಅವನಿಗೆ **ದೇವಾಧಿದೇವ, ಮಹಾದೇವ**ನೆಂದು ಹೆಸರು. ಆತನು ತಾನು ಮಂಗಳಮಯನಾಗಿರುವನಲ್ಲದೆ ಸಕಲ ಚರಾಚರಗಳಿಗೂ ಮಂಗಳಕರನಾಗಿರುವನು. ಅದರಿಂದ ಅವನಿಗೆ **ಶಿವ**ನೆಂದು ಮತ್ತೊಂದು ಹೆಸರು ಬಂದಿದೆ.

ಆತನು ಸರ್ವ ಪ್ರಪಂಚವಿಚಾರಗಳನ್ನೂ ಮರೆತುಬಿಟ್ಟು ಯೋಗಾಭ್ಯಾಸದಲ್ಲಿ ಸದಾ ನಿರತನಾಗಿರುವನು; ಆದರಿಂದಲೇ ಆತನಿಗೆ **ಭೋಲಾನಾಥ**ನೆಂದು ಇನ್ನೊಂದು ಹೆಸರು. ಆಹಾ! ಎಷ್ಟು ಸುಂದರವಾದ ಹೆಸರಿದು! ಜನರು ಅವನನ್ನು ಬೈಯಲಿ ನಿಂದಿಸಲಿ ಅವನಿಗೆ ಎಳ್ಳಷ್ಟಾದರೂ ಕೋಪವಿಲ್ಲ. ಎಲ್ಲವನ್ನೂ ಮರೆತು ಬಿಡುವನು. ಅವನು ದೇವತೆಗಳಿಗೆ ಯಾವತ್ತು ಸುಖದಾಯಕವಾದ ಸ್ಥಳಗಳನ್ನು ಕೊಟ್ಟುಬಿಟ್ಟು ತಾನು ಮನೆಮಾರಿಲ್ಲದೆ ಸ್ಮಶಾನವಾಸಿಯಾಗಿರುವನು! ದೇವತೆಗಳಿಗೆ ಅಮೃತವನ್ನಿತ್ತು ತಾನು ವಿಷವನ್ನು ಸ್ವೀಕರಿಸಿರುವನು. ಪರೋಪಕಾರವೇ ಆತನ ಪರಮ ಧ್ಯೇಯವಾಗಿರುವದು. ತಾನು ಪರಿಪರಿಯಿಂದ ಕಷ್ಟನಷ್ಟಗಳನ್ನು ಅನುಭವಿಸಿಯಾದರೂ ಪರರಿಗೆ ಸಹಾಯಮಾಡಿ ಅವರನ್ನು ಸಂತೋಷಪಡಿಸುವನು. ಇಂಥ ಪರೋಪಕಾರಿಗಳು ಲೋಕದಲ್ಲಿ ಎಂದೂ ದೊರೆಯರು."

ಯೋಗಿನಿಯ ಮುಖದಿಂದ ಈ ರೀತಿಯಾದ ಶಿವಮಹಿಮೆಯನ್ನು ಕೇಳಿ ಸತಿಯು ಕಣ್ಣುಗಳಲ್ಲಿ ನೀರು ತುಂಬಿ ಬರುವದು. ಅವಳು ದುಃಖದಿಂದ:—

"ಹಾಯ್! ಆತನಿಗೆ ಯಾರೊಬ್ಬರೂ ಸಹಾಯಕಾರಿಗಳು ಇಲ್ಲವಲ್ಲಾ! ಸ್ಮಶಾನದಲ್ಲಿರುವಾಗ ಆತನಿಗೆ ಎಷ್ಟು ಕಷ್ಟವಾಗುವದೋ ಯಾರು ಬಲ್ಲರು? ನೀರಡಿಕೆಯಿಂದ ಎದೆಯೊಣಗಿದರೂ ಗುಟಕು ನೀರನ್ನು ಕೊಡುವವರಿಲ್ಲ; ಹಸಿವೆಯಿಂದ ಜೀವವು ಕಂಠಗತವಾದರೂ ತುತ್ತು ಅನ್ನವನ್ನಿಕ್ಕುವವರಿಲ್ಲ; ಮಳೆಯಲ್ಲಿ ತೊಯಿಸಿಕೊಂಡರೂ ಬೇಸಿಗೆಯ ಬಿಸಲಿನಿಂದ ಬೆಂದು ಬೆಂಡಾದರೂ ಚಳಿಗಾಲದ ಚಳಿಯಿಂದ ಕೈಕಾಲುಗಳು ಶಿಟಿದರೂ ಕೇಳುವವರಾರು? ಆತನಿಗೆ ಆಶ್ರಯಕೊಡುವವರಾರು? ಆತನಿಗೆ ಎಷ್ಟು ಕಷ್ಟವಾಗುವದೋ ತಿಳಿಯದು! ನಾನು ಎಂಥ ದುರ್ದೈವಿಯು! ಒಂದುದಿವಸವಾದರೂ ಆತನು ನನಗೆ ಭೆಟ್ಟಿಯಾಗಿದ್ದರೆ ಕರೆತಂದು, ಮಜ್ಜನಂಗೈಸಿ, ಮಡಿಯ ಬಟ್ಟೆಯನುಡಿಸಿ, ಹಾಲು ಅನ್ನವನುಣ್ಣಿಸಿ, ಮೆತ್ತನ್ನ ಹಾಸಿಗೆಯಲ್ಲಿ ಮಲಗಿಸಿ ಆನಂದಪಡಿಸುತ್ತಿದ್ದೆನು. ಆದರೆ ಏನು ಮಾಡಲಿ? ನನ್ನ ದೈವದಲ್ಲಿ ಅಂಥ ಸುಯೋಗವಿದ್ದಂತೆ ಕಾಣುವದಿಲ್ಲ. ಅಕ್ಕಾ, ಯೋಗಿನೀ, ಹೇಳಬಾರದೇನಮ್ಮಾ! ಶಿವನು ಯಾವ ಸ್ಮಶಾನದಲ್ಲಿರುವನು? ನಾನು ಅಲ್ಲಿಗೆ ಹೋಗಬಹುದೇನು? ಅವನ ಗುರುತುಗಳ್ಯಾವವು? ನಾನು ಕರೆದರೆ ಅವನು ಬರಲಿಕ್ಕಿಲ್ಲವೇನಮ್ಮಾ! ಅವನನ್ನು ನಾನು ಹ್ಯಾಗೆ ನೋಡಬಹುದು?

ದಯಮಾಡಿ ತಿಳಿಸಮ್ಮಾ! ನಾನು ಹೋಗಿ ಆ ಪರೋಪಕಾರವ್ರತಿಯಾದ ಶಿವನನ್ನು ವಿನಯದಿಂದ ಬೇಡಿಕೊಂಡು ನಮ್ಮ ಅರಮನೆಗೆ ಕರೆದುಕೊಂಡು ಬರುವೆನು." ಎಂದು ಪರಿಪರಿಯಿಂದ ಯೋಗಿನಿಯನ್ನು ಬೇಡಿಕೊಳ್ಳುವಳು.

ಪಾಠಕರೇ, ಇದಕ್ಕೇ ನಾವು ನಿಜವಾದ ಭಕ್ತಿಮಾರ್ಗವೆನ್ನುವೆವು. ಪ್ರಪಂಚದಲ್ಲಿ ದುಃಖಿಗಳಾದ ಜನರ ದುಃಖವನ್ನು ನೋಡಿದೊಡನೆಯೇ ಅಥವಾ ಕೇಳಿದೊಡನೆಯೇ ಯಾರ ಎದೆಯು ಕರಗಿ ಅಲ್ಲಿ ಕರುಣಾರಸವು ದ್ರವಿಸಹತ್ತುವದೋ ಅವರೇ ನಿಜವಾದ ದೇವಭಕ್ತರು. ಅವರೇ ಈಶ್ವರನನ್ನು ಕಾಣಲು ಯೋಗ್ಯರು. ಜಪತಪ ಹೋಮಹವನಾದಿಗಳು ಈಶ್ವರದರ್ಶನಕ್ಕೆ ಮುಖ್ಯವಾದ ಮತ್ತು ಸುಖಕರವಾದ ಸಾಧನಗಳಲ್ಲ. ಸಕಲ ಪ್ರಾಣಿಗಳನ್ನೂ ಸಮದೃಷ್ಟಿಯಿಂದ ನೋಡಿ ಸದಾ ಭೂತದಯಾಯುಕ್ತನಾಗಿ ನಡೆಯುವದೇ ಶಿವದರ್ಶನಕ್ಕೆ ನಿಜವಾದ ಸಾಧನವು. **ಶಿವದರ್ಶನದ ರಹಸ್ಯವು ಭೂತದಯೆಯಲ್ಲಿದೆ.**

ಸತಿಯ ಈ ತರದ ಭೂತದಯಾಪರವಾದ ಈಶ್ವರಭಕ್ತಿಯನ್ನು ನೋಡಿ ಯೋಗಿನಿಗೆ ಪರಮಾನಂದವಾಯಿತು. ಅವಳು:—

ತಂಗೀ, ಈ ರೀತಿ ಕಾತರಳಾಗಬೇಡ. ಶಿವನ ಮೇಲಿನ ಈ ತರದ ಅನುರಾಗದ ಮೂಲಕವಾಗಿಯೇ ನೀನು ಈಶ್ವರದರ್ಶನವನ್ನು ನಿಜವಾಗಿಯೂ ಪಡೆಯುವೆ. ಈ ರೀತಿಯಾಗಿ, ಈ ತರದ ಉದ್ದೇಶದಿಂದ ಅಂತಃಕರಣಪೂರ್ವಕವಾಗಿ ನೀನು ಈಶ್ವರದರ್ಶನದಲ್ಲಿ ಅಪೇಕ್ಷೆಯನ್ನು ತೋರಿಸಿದರೆ ಅವನು ನಿಜವಾಗಿಯೂ ನಿನ್ನನ್ನು ಹುಡುಕಿಕೊಂಡು ಬರುವನು. ಮಗುವೇ, ಸ್ಥಿರಮನಸ್ಸಿನಿಂದ ಆ ಜಟಾಜೂಟಧಾರಿಯಾದ ವ್ಯಾಘ್ರಚರ್ಮಾಂಬರಧಾರಿಯಾದ ಶಿವನನ್ನು ಧ್ಯಾನಿಸು. ಮತ್ತು ನಿನ್ನ ಆತಿಥ್ಯವನ್ನು ಸ್ವೀಕರಿಸುವದಕ್ಕೆಂದು ಅಂತಃಕರಣಪೂರ್ವಕವಾಗಿ ಆತನನ್ನು ಕರೆ. ಆಗ ಅವನು ಸಹಜವಾಗಿ ಬಂದೇ ಬರುವನು. ಅವನನ್ನು ಹುಡುಕಲಿಕ್ಕೆ ನೀನು ಎಲ್ಲಿಗೂ ಹೋಗಬೇಕಾಗಿಲ್ಲ. ಅವನು ಈ ಜಗತ್ತಿನಲ್ಲಿ ಅಣು-ರೇಣು-ತೃಣ-ಕಾಷ್ಠಗಳಲ್ಲಿಯೂ ಪರಿಪೂರ್ಣವಾಗಿರುವನು. ಈ ಸೃಷ್ಟಿಯಲ್ಲಿ ನಾವು ಈಶ್ವರನನ್ನು ಹುಡುಕಲಿಕ್ಕೆ ಹೊರಡುವದೆಂದರೆ ಕೇವಲ ಮೂರ್ಖತನದ ಮಾತೇ ಸರಿ. ಈಶ್ವರದರ್ಶನಾಪೇಕ್ಷೆಯಿಂದ ನಾವು ಎಷ್ಟು ದೂರ ಪ್ರವಾಸಮಾಡುವೆವೋ ಅಷ್ಟುದೂರ ಈಶ್ವರನಿರುವ ಸ್ಥಳದ ವಿರುದ್ಧ

ದಿಕ್ಕಿಗೆ ಹೋದಂತಾಗುವದು. ಈಶ್ವರನು ನಮ್ಮ ಅಂತರಂಗದಲ್ಲಿಯೇ ವಾಸವಾಗಿರುವನು. ನಾವು ಅವನನ್ನು ಯಾವ ಆಕಾರಪ್ರಕಾರಗಳಿಂದ ನೋಡಲು ಅಂತಃಕರಣಪೂರ್ವಕವಾಗಿ ಬಯಸುವೆವೋ, ಅವನು ಅದೇ ಆಕಾರಪ್ರಕಾರಗಳಿಂದ ನಮಗೆ ಗೋಚರನಾಗುವನು. ಶಿವದರ್ಶನಕ್ಕೆ ತಕ್ಕ ಉಪಾಯಗಳೂ ಇರುವವು. ಪ್ರವೃತ್ತಿಮಾರ್ಗದಿಂದ ಶಿವದರ್ಶನವಾಗುವದೆಂದು ಕೆಲವರು ಹೇಳಿದರೆ ನಿವೃತ್ತಿಮಾರ್ಗವೇ ಈಶ್ವರದರ್ಶನಕ್ಕೆ ಪ್ರಮುಖಸಾಧನವೆಂದು ಕೆಲವರು ಪ್ರತಿಪಾದಿಸುವರು. ಹೇಗಿದ್ದರೂ ಭೂತದಯಾಯುಕ್ತವಾದ ಕರ್ಮಮಾರ್ಗವೇ ಪ್ರಧಾನವಾದದ್ದೆಂದು ಬಹುಮತದಿಂದ ನಿರ್ಣಯವಾಗುವದು.

ಸತಿಯು ಇಲ್ಲಿಯವರೆಗೂ ಯೋಗಿನಿಯ ಉಪದೇಶವನ್ನು ಅನಿಮಿಷನೇತ್ರೆಯಾಗಿ ಕುಳಿತು ಕೇಳುತ್ತಿದ್ದಳು. ಕರ್ಮಮಾರ್ಗವೇ ಪ್ರಧಾನವಾದದ್ದೆಂಬ ಮಾತು ಕೇಳಿ ಸತಿಯ ಅಂತರಂಗಕ್ಕೆ ಆಘಾತವಾಯಿತು. ಅವಳಿಗೆ ಕರ್ಮಮಾರ್ಗದಲ್ಲಿ ಆಸಕ್ತಿ ಕಡಿಮೆಯಾಗಿತ್ತು. ಆದರಿಂದ ಅವಳು ಕೊಂಚ ಆಕಾಂಕ್ಷಾಯುಕ್ತ ಸ್ವರದಿಂದ:—ಅಕ್ಕಾ, ಕರ್ಮಮಾರ್ಗವೇ ಪ್ರಧಾನವೆಂದು ನೀನು ಹೇಳಿದೆಯಲ್ಲವೇ? ಆದರೆ ಅನೇಕರಿಗೆ ಈ ಮಾತು ಸಮಾಧಾನಕರವಾಗಿಲ್ಲವೆಂದು ನೀನು ಹೇಳಿದಂತೆಯೇ ನನಗಾದರೂ ತಕ್ಕಂತೆ ಸಮಾಧಾನಕರವಾಗಲಿಲ್ಲ. ಈ ಮಾತಿನಲ್ಲಿ ನನಗೆ ಪೂರ್ಣ ವಿಶ್ವಾಸವುಂಟಾಗುವಂತೆ ನೀನು ವಿಷಯವನ್ನು ಚನ್ನಾಗಿ ತಿಳಿಸು. ತಿರುಗಿ ಕೇಳಿದೆನೆಂದು ಬೇಸರಗೊಳ್ಳಬೇಡ.

**ಯೋಗಿನಿ**:—ತಂಗೀ ನಿನ್ನ ಮಾತಿನಿಂದ ನನಗೆ ಎಂದೂ ಬೇಸರವುಂಟಾಗಿರಲಿಲ್ಲ. ಇಂದೂ ಬೇಸರವಿಲ್ಲ. ನೀನು ಕೇಳುವ ಪ್ರಶ್ನೆಯು ಸಮಂಜಸವಾಗಿರುವದಾದರೂ ಆ ಬಗ್ಗೆ ನಿನಗೆ ಸಂಶಯಬೇಡ. ಯಾರು ನಿಜವಾಗಿ ಜ್ಞಾನಿಗಳಾಗಿರುವರೋ ಅವರಿಗೆ ಕರ್ಮದ ಅವಶ್ಯಕತೆಯಿಲ್ಲ. ನೀನು ಅಂಥ ಜ್ಞಾನವನ್ನು ಇದುವರೆಗೂ ಪಡೆದಿಲ್ಲ. ನೀನು ಕರ್ಮಾಧಿಕಾರಿಯಾದ ಮುಮುಕ್ಷುವಾಗಿರುವೆಯೆಂದು ನನ್ನ ಭಾವನೆ. ಆದರಿಂದ ನೀನು ಫಲಾಪೇಕ್ಷೆಯಿಲ್ಲದೆ ಕರ್ಮಗಳನ್ನು ಮಾಡಲೇಬೇಕು. “ **ತಮೇತಂ ವೇದಾನುವಚನೇನ** ” ಮುಂತಾದ ಶ್ರುತಿವಚನಗಳ ಮರ್ಮಾನುಸಾರವಾಗಿ ಜ್ಞಾನಕ್ಕೆ ಸಾಧನಭೂತವಾದ ನಿತ್ಯ ನೈಮಿತ್ತಿಕ ಕರ್ಮಗಳನ್ನು ಶಾಸ್ತ್ರವಿಹಿತವಾದ ಕ್ರಮಾನು

ರೋಧದಿಂದ ಮಾಡತಕ್ಕದ್ದು. “ಕರ್ಮಗಳು ಹಲವು ವಿಧವಾಗಿವೆ; ಪ್ರಾಪಂಚಿಕ ಕರ್ಮಗಳು ಬೇರೆ, ಪಾರಮಾರ್ಥಿಕ ಕರ್ಮಗಳು ಬೇರೆ” ಎಂದು ಕೆಲವರ ಹೇಳಿಕೆ. ಆದರೆ ನನಗೀಮಾತಿನಲ್ಲಿ ವಿಶ್ವಾಸ ಕಡಿಮೆ. ಪ್ರಪಂಚ ವಿಲ್ಲದೆ ಪಾರಮಾರ್ಥವಿಲ್ಲ; ಪ್ರಪಂಚವೇ ಪಾರಮಾರ್ಥ, ಪಾರಮಾರ್ಥವೇ ಪ್ರಪಂಚ, ಎಂಬದು ನನ್ನ ನಂಬಿಗೆ. ಮನುಷ್ಯನ ಮನಸಿನಲ್ಲಿ ಯಾವದು ಪ್ರಪಂಚವೆಂದು ತೋರುವದೋ ಅದೇ ಪ್ರಪಂಚ; ಯಾವದು ಪಾರಮಾರ್ಥ ವೆಂದು ತೋರುವದೋ ಅದೇ ಪಾರಮಾರ್ಥ. ನವಯೌವನಸಂಪನ್ನೆಯೂ ಸುಂದರಾಂಗಿಯೂ ಆದ ಪತ್ನಿಯ ಮುಖಾವಲೋಕನ, ಅಧರಚುಂಬನ ಗಳಲ್ಲಿ ಅವಳ ಪತಿಯೂ ಮೂರು ವರುಷದ ಮುದ್ದುಮಗುವಿನ ಆಲಿಂಗನದಲ್ಲಿ ತಾಯಿಯೂ ಈಶ್ವರಸಾಕ್ಷಾತ್ಕಾರವನ್ನು ಪಡೆಯಬಹುದು. “ಯಾವ ಈಶ್ವ ರನು ಈ ತರದ ಪರಮಾನಂದವನ್ನು ಸೃಷ್ಟಿಸಿದನು?” ಎಂಬ ಪ್ರಶ್ನೆಯು ಬಂದೊಡನೆಯೇ ಆತನಲ್ಲಿ ಅವಿಚಲವಾದ ಶ್ರದ್ಧೆಯು ಉದಯಿಸದಿರದು. ಶ್ರದ್ಧೆಯೇ ಈಶ್ವರಸಾಕ್ಷಾತ್ಕಾರದ ಮೂಲವು. ಅರ್ಥಾತ್ ಪ್ರಪಂಚಮಾರ್ಗವೂ ಅದಕ್ಕನು ಗುಣವಾದ ಕರ್ಮಮಾರ್ಗವೂ ಪಾರಮಾರ್ಥಿಕ ಮಾರ್ಗದಿಂದ ಭಿನ್ನವಾಗಿಲ್ಲ.” ಸತಿಗೆ ಯೋಗಿನಿಯ ಮಾತಿನ ಭಾವವು ತಿಳಿಯಿತು. ಹೀಗೆ ಹೇಳಲು ಅವಳ ಮನೋವೃತ್ತಿಯು ಬದಲಾಯಿತು. ನಿವೃತ್ತಿಮಾರ್ಗದಲ್ಲಿ ಓಲಾಡುವ ಅವಳ ಮನಸ್ಸು ಪ್ರವೃತ್ತಿಮಾರ್ಗದ ಕಡೆಗೆ ಹೊರಳಿತು. ಅವಳು ಯೋಗಿನಿಯನ್ನು ಇನ್ನೊಂದು ಮಾತನ್ನು ಕೇಳಿದಳು. “ಅಕ್ಕಾ ಪ್ರವೃತ್ತಿಮಾರ್ಗವನ್ನವಲಂಬಿಸಿ ಸಂಸಾರವನ್ನು ಮಾಡಹತ್ತಿದರೆ ನಮಗೆ ಆಗ ಅಡಿಗಡಿಗೆ ಒದಗುತ್ತಿರುವ ದುಃಖ ದಿಂದ ನಾವು ಬೇಸರಗೊಳ್ಳಬಹುದಲ್ಲವೇ? ಹಾಗೆ ಬೇಸತ್ತರೆ ಮನಸ್ಸಿನ ಸ್ಥಿರ ವಾದ ಶಾಂತಿಯು ಎಲ್ಲಿ ಉಳಿಯುವದು? ಶಾಂತಿಯಿಲ್ಲದ ಮೇಲೆ ನಮ್ಮ ಇಷ್ಟ ಸಾಧನೆಯಾಗುವ ಬಗೆಯೆಂತು? ಈಶ್ವರಸಾಕ್ಷಾತ್ಕಾರವೆಲ್ಲಿ?”

**ಯೋಗಿನಿ:**—ತಂಗೀ, ಪ್ರಪಂಚದಲ್ಲಿ ಸುಖದುಃಖಗಳೆಂಬ ಎರಡು ಭಿನ್ನ ವಸ್ತುಗಳಿರುವದಿಲ್ಲ. ಸುಖದುಃಖಗಳು ನಮ್ಮ ಮನಸಿನಲ್ಲಿಯೇ ಇರುವವು. ನಾವು ಯಾವದಕ್ಕೆ ಸುಖವೆನ್ನುವೆವೋ ಅದೇ ಸುಖವು. ಯಾವದಕ್ಕೆ ದುಃಖ ವೆನ್ನುವೆವೋ ಅದೇ ದುಃಖವು. ಒಬ್ಬರು ದುಃಖವೆನ್ನುವ ಮಾತಿಗೇ ಇನ್ನೊಬ್ಬರು ಸುಖವೆನ್ನುವರು. ಒಬ್ಬರಿಗೆ ಮಜ್ಜಿಗೆಯು ಮೇಲೆ ಪ್ರೀತಿಯಾದರೆ ಇನ್ನೊ

ಬ್ಬರಿಗೆ ಹಾಲಿನ ಮೇಲೆ ಮಮತೆ. ಹಾಲಿನ ಪ್ರೀತಿಯುವರಿಗೆ ಹಾಲಿನಿಂದ ಸುಖ ವಾಗುವದು; ಮಜ್ಜಿಗೆಯ ಮೆಚ್ಚಿಗೆಯುಳ್ಳವರಿಗೆ ಮಜ್ಜಿಗೆಯಿಂದ ಸುಖವಾಗು ವದು. ಇಷ್ಟರಿಂದಲೇ ಹಾಲು-ಮಜ್ಜಿಗೆಗಳಲ್ಲಿ ಯಾವದು ಇಷ್ಟಕರ? ಯಾವದು ಕಷ್ಟಕರ? ಎಂದು ನಿರ್ಣಯಿಸಬಹುದೇನು? ಇದರಂತೆಯೇ ಪ್ರಪಂಚದ ಸಕಲ ವಿಷಯಗಳು. ವಿಷಯಲಂಪಟರಾಗಿರುವವರಿಗೆ ವಿಷಯಗಳ ಅಭಾವ ದಿಂದ ಕಷ್ಟವಾಗುವದು. ಅದೇ ಲಂಪಟತನವಿಲ್ಲದವರಿಗೆ ಅವುಗಳ ಅಭಾವ ದಿಂದಾಗಲಿ, ವಿಯೋಗದಿಂದಾಗಲಿ ಕಷ್ಟವೆನಿಸದು. ಅರ್ಥಾತ್ ಪ್ರಪಂಚದ ವಿಷಯಗಳಲ್ಲಿ ಕಷ್ಟಕರ ಗುಣವಿರದೆ ಅವುಗಳ ವಿಷಯವಾಗಿ ನಮ್ಮ ಮನಸಿ ನಲ್ಲಿರುವ ಲಂಪಟತನವು ಕಷ್ಟಕರವಾಗಿರುವದು. ಪ್ರಪಂಚದ ಸಕಲ ಕರ್ತವ್ಯ ಗಳನ್ನೂ ಲಂಪಟತೆಯಿಲ್ಲದೆ ಮಾಡಬೇಕು. ಎಂದರೆ, ಆದರೆ ಆಯಿತು, ಹೋದರೆ ಹೋಯಿತು, ಎಂಬ ಅನಾದರಬುದ್ಧಿಯಿಂದ ಮಾಡಬೇಕೆಂದು ಮಾತ್ರ ಅರ್ಥ ವಲ್ಲ. ಲಂಪಟತನವಿಲ್ಲದಿರುವ ಮಾತು ಬೇರೆ, ಅನಾದರದ ಮಾತು ಬೇರೆ. ಸಿದ್ಧಿಯು ಆಗಲೇಬೇಕೆಂಬ ಆಸ್ತಿಕಭಾವನೆಯು ಕಾರ್ಯದ ಪ್ರವೃತ್ತಿಮಾರ್ಗ ದಲ್ಲಿ ಇರಬೇಕಾಗಿರುವದಾದರೂ ನಮ್ಮ ಇಚ್ಛೆಯ ವಿರುದ್ಧವಾಗಿ ಏನಾದರೂ ಒಂದು ಮಾತು ಘಟಿಸಿದರೆ ನಾವು ಅದಕ್ಕೆ ಹಳಹಳಿಪಡಬಾರದು. ಅದಕ್ಕೊಂದು ಹೊಣೆಯನ್ನು ಹೇಳಬೇಕು. ಕೆಲವರು ದೈವ (ಅದೃಷ್ಟ) ದ ಹೊಣೆಯನ್ನು ಹೇಳುವರು. ದೈವವಾದಿಗಳಿಗೆ ದೈವದ ಹೊಣೆಯು ಪ್ರಿಯಕರವು. ಕರ್ಮ ವಾದಿಗಳಿಗೆ ಅಜ್ಞಾನದ ಹೊಣೆಯು ಸಮ್ಮತವು. ಏನೆಂದರೂ ಅರ್ಥವು ಒಂದೇ. "ಆಯಿತೆಂದು ಹಿಗ್ಗಬಾರದು; ಹೋಯಿತೆಂದು ತಗ್ಗಬಾರದು." ಇದೇ ಇದ ರೊಳಗಿನ ಗೂಢವು.

ಸತಿಯ ಕಣ್ಣುಗಳಲ್ಲಿ ಆನಂದಾಶ್ರುವು ಉಕ್ಕಿ ಬಂದಿತು. ಅವಳು ಪ್ರೀತಿ ಯಿಂದ ಯೋಗಿನಿಯನ್ನು ಆಲಿಂಗಿಸಿದಳು. ಸತಿಗೆ ತಂದೆತಾಯಿಗಳ ಕರ್ಮ ಮಾರ್ಗಪ್ರವೃತ್ತಿಯ ವಿರುದ್ಧವಾಗಿರುವ ತನ್ನ ನಿವೃತ್ತಿಮಾರ್ಗವನ್ನು ಹೇಗೆ ಕಲೆಹಾಕಲೆಂಬದು ಇಂದಿನವರೆಗೂ ಒಂದು ಪ್ರಬಲವಾದ ಯೋಚನೆಯಾಗಿ ದ್ದಿತು. ಇಂದು ಅವಳಿಗೆ ಸಮಾಧಾನವಾಯಿತು. ಸತಿಯ ಚಿಕ್ಕ ವಯಸ್ಸಿ ನಲ್ಲಿಯೇ ಅವಳ ವಿವಾಹದ ವಿಚಾರಕ್ಕಾಗಿ ತಾಯಿಯು ಮೇಲೆ ಮೇಲೆ

ಮಾತೆತ್ತುತ್ತಿದ್ದಳು. ಅದನ್ನು ಕೇಳಿ ತಾನು ಹೇಗೆ ನಡೆಯಲಿ? ತಂದೆತಾಯಿಗಳನ್ನು ಸಮಾಧಾನಪಡಿಸಿ, ತನ್ನ ಅಂತರಂಗದ ನಿವೃತ್ತಿಮಾರ್ಗವನ್ನು ಹೇಗೆ ಕಾಯ್ದುಕೊಳ್ಳಲಿ? ಎಂದು ಅವಳು ಯೋಚಿಸಬೇಕಾಗುತ್ತಿತ್ತು. ಯೋಗಿನಿಯ ಮಾತಿನಿಂದ ಅವಳು ಸಮಾಧಾನಹೊಂದಿ ಪ್ರಪಂಚದಲ್ಲಿದ್ದುಕೊಂಡೇ ಪಾರಮಾರ್ಥವನ್ನು ಸಾಧಿಸಿಕೊಳ್ಳುವೆನೆಂದು ನಂಬಿದಳು. ಹಾಗು ತನಗೆ ಸಹಾಯಕಾರಿಯೂ ಅನುರೂಪನೂ ಆದ ಪತಿಯನ್ನು ನೋಡಿ ಮದುವೆಯಾಗಬೇಕೆಂದು ಅವಳು ನಿರ್ಣಯಿಸಿದಳು. ಅನುರೂಪನಾದ ಪತಿಯು ಯಾರು? ಎಂಬ ಪ್ರಶ್ನೆಯು ಮುಂದೆ ಬಂದೊಡನೆಯೇ ಅವಳಿಗೆ ಹಿಂದೆ ಯೋಗಿನಿಯು ಹೇಳಿದ ಶಿವದರ್ಶನದ ವಿಚಾರವು ಮುಂದೆ ಬಂದಿತು. ಅವಳು ತಟ್ಟನೆ ಅಕ್ಕಾ! ಈಶ್ವರನು ನನಗೆ ದರ್ಶನಕೊಟ್ಟು ನನ್ನ ಕೋರಿಕೆಗಳನ್ನು ಪೂರೈಸಬಹುದೇನೇ? ಎಂದು ಪ್ರಶ್ನೆಮಾಡಿದಳು. ಯೋಗಿನಿಯೂ ಪ್ರಪಂಚಮಾರ್ಗಕ್ಕೆ ಹೊರಳಿದ ಸತಿಯ ಮನಸ್ಸಿನಲ್ಲಿ ಯಾವ ವಿಚಾರವುಂಟಾಗಿ ಅವಳು ಈ ಪ್ರಶ್ನೆಮಾಡಿದಳೆಂಬದನ್ನು ತಟ್ಟನೆ ತರ್ಕಿಸಿ ತಿಳಿದುಕೊಂಡುಬಿಟ್ಟಳು. ಅವಳು “ ತಂಗೀ, ನೀನು ಬಯಸುವದನ್ನೆಲ್ಲಾ ಕೊಡಲು ಆತನು ಸಿದ್ಧನಾಗಿದ್ದಾನೆ. ನೀನೇ ನನ್ನ ಪತಿಯಾಗಬೇಕೆಂದರೂ ಅವನು ಒಪ್ಪಿಕೊಳ್ಳುವನು! ” ಎಂದಳು. ಯೋಗಿನಿಯ ಮಾತು ಕೇಳಿ ಸತಿಗೆ ತುಸು ನಾಚಿಕೆಯುಂಟಾಯಿತು. ಮತ್ತು ಆ ಕಪಾಲಮಾಲಾಧಾರಿಯಾದ ಶಿವನೇ ತನ್ನ ಪತಿಯಾಗಬೇಕೆಂಬ ವಿಚಾರವನ್ನು ಅಂತರಂಗದಲ್ಲಿ ನಿರ್ಧರಿಸಿಕೊಂಡುಬಿಟ್ಟಳು!

## ನಾಲ್ಕನೆಯ ಪರಿಚ್ಛೇದ.

## ವಿವಾಹವಿಚಾರ.




ಲ್ಯದ ಬೈಲಿನಲ್ಲಿ ವಿಹರಿಸುತ್ತಿದ್ದ ಸತಿಯು ತಾರುಣ್ಯದ ಸೆರೆಮನೆಯನ್ನು ಹಣೆಯಿಕ್ಕಿ ನೋಡಹತ್ತಿದಳು. ಸ್ವಭಾವ-ಸುಕುಮಾರವಾದ ಅವಳ ಅಂಗೋಪಾಂಗಗಳು ವಿಕಾಸವಾಗಿ ಬಣ್ಣವೇರಿ ತೋರಹತ್ತಿದವು. ಆದಿಮಾಯೆಯ ಅವತಾರವಾಗಿದ್ದ ಸತಿದೇವಿಯ ಅಪ್ರತಿಮ ತೇಜಸ್ಸಿನಿಂದ ಬೆಳಗುತ್ತಿರುವ ಅವಯವಗಳು ತಾರುಣ್ಯಸೂಚಕವಾದ ನೂತನ ಪ್ರಭೆಯಿಂದ ಕೂಡಿ ನೋಡುವವರ ಕಣ್ಣುಗಳನ್ನು ಕುಕ್ಕಿಬಿಡಹತ್ತಿದವು. ಆದರೆ ಇದೊಂದು ವಿಚಿತ್ರ ಸ್ಥಿತಿ:—ಸರ್ವಾಂಗಸುಂದರಿಯಾಗಿದ್ದ ಸತಿಗೆ ಸಂಸಾರದ ಸುಖದಮೇಲೆ ಅಪ್ರೀತಿ; ಉಡಿಗೆತೊಡಿಗೆಗಳು ಬೇಡ, ಅಲಂಕಾರಗಳು ಬೇಡ, ಹಣೆಗೆ ಕುಂಕುಮಬೇಡ, ತಲೆಗೆ ಎಣ್ಣೆಬೇಡ, ಹೆಳಲುಬೇಡ, ಹೊತ್ತುಹೊತ್ತಿಗೆ ಊಟವೂ ಬೇಡ, ಪ್ರಪಂಚಸುಖಕ್ಕೆ ಸಂಬಂಧಿಸಿದ ಯಾವ ವಿಲಾಸದ ಒಡವೆಯೂ ಅವಳಿಗೆ ಬೇಡವೇ ಬೇಡ. ಸತಿಯ ಅಕ್ಕಂದಿರ ಸ್ವಭಾವ ಬೇರೆ; ಇವಳ ಸ್ವಭಾವ ಬೇರೆ. ಅವರು ಯಾವಾಗಲೂ ಉಡಿಗೆತೊಡಿಗೆಗಳನ್ನು ಬಯಸುವರು, ಆಟಪಾಟಗಳಲ್ಲಿಯೇ ಹೊತ್ತುಗಳೆಯುವರು. ಇವಳಿಗೆ ಅದಾವದೂ ಬೇಡ, ಇವಳ ಒಲವೇ ಆಕಡೆಗಿರಲಿಲ್ಲ. ಅವರು ಬೆಲೆಯುಳ್ಳ ವಸ್ತ್ರಾಲಂಕಾರಗಳನ್ನೂ ಕಸ್ತೂರೀ ಚಂದನಾದಿ ಸುಗಂಧದ್ರವ್ಯಗಳನ್ನೂ ಬಯಸುವರು. ಇವಳಿಗೆ ನಾರುಮಡಿಯ ಮೇಲೆ ಬಲು ಪ್ರೀತಿ; ರುದ್ರಾಕ್ಷಮಾಲೆ ಸ್ಫಟಿಕದ ಸರಗಳು ಇವನ್ನು ಧರಿಸಿದಷ್ಟೂ ಬೇಕು. ತಂದೆಯ ಯಜ್ಞಕುಂಡದ ವಿಭೂತಿಯನ್ನು ಮೈಗೆಲ್ಲ ಬಲು ಅಕ್ಕರೆಯಿಂದ ಬೊಳಿದುಕೊಳ್ಳುವಳು. ತಲೆಯ ಕೂದಲು ಜಡೆಗಟ್ಟಿದ್ದವು. ಆದರೇನಾಯಿತು? ಸ್ವಭಾವಸುಂದರಿ. ಈ ಸಮಯದಲ್ಲಿ—

**" ಇಯಮಧಿಕ ಮನೋಜ್ಞಾ ವಲ್ಕಲೇನಾಪಿ ತನ್ವೀ |**
**ಕಿಮಿವಹಿಮಧುರಾಣಾಂ ಮಂಡನಂ ನಾಕೃತೀನಾಮ್ ||"**

ಎಂಬ ಕವಿಕುಲಗುರು ಕಾಳಿದಾಸನ ಉಕ್ತಿಯು ಸ್ಮರಣೆಗೆ ಬರುವದು. ಸ್ವಭಾವ ಸುಂದರಿಯಾದ ಸತಿಯು ಈ ತರದ ಯೋಗಿನಿಯ ವೇಷದಲ್ಲಿಯೂ ಜಗನ್ಮೋಹಕಳಾಗಿ ಒಪ್ಪುತ್ತಿದ್ದಳು.

ಆದರೆ ದಕ್ಷರಾಜನ ಪತ್ನಿಗೆ ಬಲು ಬೇಸರ; ಸತಿಯು ಈ ತರದ ವೈರಾಗ್ಯ ವಿಚಾರವನ್ನು ನೋಡಿದರೆ ಅವಳ ಮನಸ್ಸು ಕೊರಗುವದು. ಪ್ರಪಂಚದ ವಿಷಯದಲ್ಲಿಯೂ ಶರೀರಸುಖದ ವಿಷಯವಾಗಿಯೂ ಇಷ್ಟು ಉದಾಸೀನಳಾಗಿ ಕೊರಗುತ್ತಿರುವ ಮಗಳನ್ನು ನೋಡಿದರೆ ಯಾವ ತಾಯಿಯ ಎದೆಯೊಡೆಯದು? ಅವಳು ಒಂದುದಿನ ಮಗಳನ್ನು ಕರೆದು ಬಹು ಕಷ್ಟದಿಂದ—" ಮಗುವೇ, ನೀನು ಈಗ ದೊಡ್ಡವಳಾಗುತ್ತ ಬಂದೆ. ನಿನ್ನ ಮನಸಿನಲ್ಲಿ ಇರುವದಾದರೂ ಏನು? ಉಡಿಗೆಯೋ, ತೊಡಿಗೆಯೋ, ಹೆಳಲೇ, ಇಂಥ ಜೋಗಿಣಿಯನ್ನು ಯಾವಾತನು ಮದುವೆಯಾದಾನೇ?" ತಾಯಿಯ ಕಂಠವು ಬಿಗಿದುಬಂದಿತು. ಎರಡು ಹನಿ ಕಣ್ಣೀರು ತಟಕಿಕ್ಕಿತು.

ಸತಿಯು ತಾಯಿಯ ಅವಸ್ಥೆಯನ್ನು ನೋಡಿ ಎಚ್ಚತ್ತಳೆಂಬಂತೆ ತೋರಿತು. ಅವಳು ತಾಯಿಯನ್ನು ಅಪ್ಪಿಕೊಂಡು " ಅಮ್ಮಾ! ಮದುವೆಯಾಗುವವರು ಏನೇನು ನೋಡುತ್ತಾರೆ?" ಎಂದು ಕುತೂಹಲದೊಡನೆ ಪ್ರಶ್ನೆಮಾಡಿದಳು. ಆದರೆ ಅವಳ ಮನದೊಳಗಿನ ವಿಚಾರವೇ ಬೇರೆಯಾಗಿತ್ತು. ಇಂಥ ಉಡಿಗೆ ತೊಡಿಗೆ ಹೆಳಲು ಮುಂತಾದ ಕೃತ್ರಿಮ ಅಲಂಕಾರಗಳನ್ನು ಪ್ರೀತಿಸುವವನನ್ನು ನಾನು ಮದುವೆಯಾಗಬೇಕೇ, ಎಂದು ಅವಳು ಯೋಚಿಸುತ್ತಿದ್ದಳು.

**ತಾಯಿ:**—ಮಗೂ, ಮದುವೆಯಾಗತಕ್ಕವರು ಮೊದಲು ವಧುವಿನ ಕುಲಗೋತ್ರಗಳನ್ನು ನೋಡುವರು. ಆ ಬಳಿಕ ಅವಳ ಸ್ವಭಾವವನ್ನು ನೋಡುವರು; ಬುದ್ಧಿಕುಶಲತೆಯನ್ನೂ ನೋಡದಿರರು; ಅದರಂತೆಯೇ ಕನ್ಯೆಯ ರೂಪ ವೇಷಗಳನ್ನು ಕೂಡ ಅವರು ಮರೆತುಬಿಡರು.

ಸತಿಗೆ ತುಸು ಆಶ್ಚರ್ಯವೆನಿಸಿತು. ಯಾವದನ್ನೂ ನೋಡಿದರೂ ಅಡ್ಡಿಯಿಲ್ಲ. ಬಾಹ್ಯಸೌಂದರ್ಯದಲ್ಲಿ ಅವರ ದೃಷ್ಟಿಯೇಕೆಂಬದು ಅವಳ ಆಕ್ಷೇಪಣೆಯ ಮಾತಾಗಿದ್ದಿತು. ಅದನ್ನವಳು ತಾಯಿಯನ್ನು ಕೇಳಿಬಿಟ್ಟಳು.

**ತಾಯಿ:**—ಮಗೂ, ನೀನನ್ನುವದು ಅನ್ಯಾಯವಲ್ಲ. ಬಾಹ್ಯಸೌಂದರ್ಯವು ಪ್ರಪಂಚದಲ್ಲಿ ಯಾವದಕ್ಕೂ ಉಪಯೋಗವುಳ್ಳದ್ದಲ್ಲ. ಅಂತರಂಗದ ಸೌಂದರ್ಯವೇ ನಿಜವಾದ ಸೌಂದರ್ಯವು. ಅದನ್ನೇ ಮದುವೆಯಾಗುವವರು ನೋಡಬೇಕು. ಆದರೆ ತಾರುಣ್ಯದಲ್ಲಿ ವಿಷಯಾಸಕ್ತರಾದ ಪುರುಷರಿಗೆ ಬಾಹ್ಯ ಸೌಂದರ್ಯದ ಕಡೆಗೇ ದೃಷ್ಟಿಯು ಎಳೆಯುವದಲ್ಲದೆ ಅಂತರಂಗದ—ನಿಜವಾದ, ಸ್ಥಿರವಾದ—ಸೌಂದರ್ಯವು ಅವರ ಮೋಹಾಂಧ-ದೃಷ್ಟಿಗೆ ಕಾಣಿಸದು. ಅದರಿಂದ ಬಾಹ್ಯಾಂಗಸೌಂದರ್ಯವೂ ಪ್ರಪಂಚದಲ್ಲಿ ಕಾಲಿಡಬೇಕೆನ್ನುವ ತರುಣಿಯರಿಗೆ ಮಹತ್ವದ ಸಾಧನವೆನಿಸುವದು.

ಸತಿಗೆ ಈಗ ಮಾತ್ರ ನಗೆಬಂದಿತು. “ ಅಮ್ಮಾ, ನನ್ನನ್ನು ಇಂಥ ವಿಷಯಾಸಕ್ತನ ಕೊರಳಿಗೆ ಗುದ್ದಿಯಂತೆ ಕಟ್ಟಬೇಕೆನ್ನುವಿರಾ? ಯಾವಾತನು ನನ್ನ ಅಂತರಂಗವನ್ನು ಅರಿತು ನಡೆಯುವನೋ ಅವನನ್ನೇ ಮದುವೆಯಾಗುವೆನು. ಅಂಥಿಂಥ ಪಾಮರನಿಗೆ ನನ್ನನ್ನು ದಾನಮಾಡುವದಕ್ಕಿಂತ ಅಗೋ, ನೀಲಧಾರೆಯ ವಕ್ಷದಲ್ಲಿ ನನಗೆ ಸ್ಥಳವಿರುವದು; ಅಲ್ಲಿಯೇ ಹೋಗಿ ಕೂಡ್ರುವೆನು; ಇಲ್ಲವಾದರೆ ಈ ಯೋಗಿನಿಯ ವೇಷವೇನು ನನಗೆ ಅಯೋಗ್ಯವಾದದ್ದೆನ್ನುವಿಯಾ? ನನ್ನ ಅಕ್ಕ ಯೋಗಿನಿಯು ಎಷ್ಟು ಆನಂದದಿಂದ ಶಿವಧ್ಯಾನಾಸಕ್ತಳಾಗಿ ಕಾಲ ಕಳೆಯುತ್ತಿರುವಳು? ನನ್ನನ್ನೂ ಅವಳೊಡನೆಯೇ ಕಳುಹಿಸಿಬಿಡು.

ತಾಯಿಯು ಅಂತರಂಗಕ್ಕೆ ಬರೆಯಿಕ್ಕಿದಂತಾಯಿತು. ಇವಳೊಡನೆ ಯಾಕೆ ಮಾತಾಡಲು ಬಂದೆನೆಂದು ಅವಳು ಮನಸಿನಲ್ಲಿಯೇ ಅಂದುಕೊಂಡಳು. ತುಸು ನಾಚಿಕೆಯೂ ಉಂಟಾಯಿತು. ಮಗಳ ಅಪ್ರತಿಮ ಸುವಿಚಾರಗಳನ್ನು ಕೇಳಿ ಅಭಿಮಾನವೆನಿಸಿತು; ಆನಂದವಾಯಿತು. ಅವಳು ಇನ್ನು ಮಾತಾಡಲಿಲ್ಲ.

ಸತಿಯ ಈ ತರದ ಸ್ಥಿತಿಯನ್ನು ನೋಡಿ ದಕ್ಷರಾಜನಿಗೂ ಒಮ್ಮೊಮ್ಮೆ ದುಃಖವಾಗುವದು; ತುಸು ಕೋಪವೂ ಬರುವದು. ಆದರೆ ಸತಿಯ ಸರಳತನವನ್ನೂ ಆನಂದವೃತ್ತಿಯನ್ನೂ ಮುದ್ದುಮೊಗವನ್ನೂ ನೋಡಿದರೆ ಆ ದುಃಖವು ಸುಖವಾಗಿ ಪರಿಣಮಿಸುವದು; ಕೋಪವು ಪ್ರೇಮದ ಉದಯಕ್ಕೆ ಕಾರಣವಾಗುವದು. ಸತಿಯಲ್ಲಿ ಇನ್ನೊಂದು ಗುಣವು ಒಡೆದು ತೋರಹತ್ತಿತ್ತು. ಅವಳು ಬಲು ಅಭಿಮಾನಿ. ಒಂದು ಮಾತು ಹೆಚ್ಚಿಗೆ ಬಂದರೂ ಸಹಿಸಳು.

ಪುನಃ ನಾಲ್ಕಾರುತಿಂಗಳು ಕಳೆಯಿತು. ಸತಿಯ ತಾಯಿಗೆ ಮಗಳ ಮದುವೆಯ ವಿಚಾರವು ಹುಟ್ಟಿತು; ತಂದೆಗೆ ಈ ಮಾತಿನ ವಿಷಯವಾಗಿ ಇನ್ನೂ ಯೋಚನೆಯುಂಟಾಗಿರಲಿಲ್ಲ. ಸತಿಗೆ ತಕ್ಕ ವರನನ್ನಾರು ಹುಡುಕುವರು? ತನ್ನ ಮನಸಿಗೆ ಬರಬೇಕು; ಪತಿಯು ಸಮ್ಮತಿಸಬೇಕು; ಸತಿಯ ಒಪ್ಪಿಗೆಯಿರಬೇಕು. ಅವಳು ಒಮ್ಮೆ ತನ್ನ ಮನಸಿಗೆ ಬಂದರೆ ಪತಿರಾಜನನ್ನು ಹೇಗಾದರೂ ಸಮ್ಮತಿಪಡಿಸುವೆನೆಂಬ ಭರವಸೆಯುಳ್ಳವಳಾಗಿದ್ದಳು. ಆದರೆ ಸತಿಯ ಮಾತು ಮಾತ್ರ ಬೇರೆಯಾಗಿತ್ತು. ಅವಳಿಗೆ ಅರಮನೆಬೇಡ; ಆರಾಮಬೇಡ; ಶ್ರೀಮಂತಿಕೆ ಬೇಡ; ಪತಿಯ ಸೌಂದರ್ಯದ ಯೋಚನೆಯಿಲ್ಲ; ಅತ್ತೆಮಾವಂದಿರ ವಿಚಾರ ಬೇಡ; ವರನ ಸದ್ಗುಣ ಸುಸ್ವಭಾವಗಳ ಹೊರತು ಇನ್ನಾವದರ ಕಡೆಗೂ ಅವಳ ದೃಷ್ಟಿಯೇ ಇರಲಿಲ್ಲ. ಇಂಥ ವರನು ನಮ್ಮ ಯೋಗ್ಯತೆಗೆ ತಕ್ಕವನಾಗಿದ್ದು ದೊರೆಯುವದು ಹೇಗೆಂದು ತಾಯಿಯು ಅಡಿಗಡಿಗೆ ಯೋಚಿಸುವಳು. ಅಷ್ಟರಲ್ಲಿ ಅವಳಿಗೊಂದು ಉಪಾಯವು ತೋಚಿತು. "ಸತಿಯ ಚಿಕ್ಕ ತಂದೆಯಿದ್ದಾರಲ್ಲ, ನಾರದರು, ಅವರರಿಯದ ವರನಾರು? ಮೂರು ಲೋಕಗಳಲ್ಲಿಯೂ ಎಲ್ಲರೂ ಅವರ ಚಿರಪರಿಚಿತರು. ಅವರನ್ನು ಕಾಣಬೇಕು, ಅಂದರೆ ತಾನೇ ಕೆಲಸವಾಗುವದು." ಎಂದು ಅವಳು ಯೋಚಿಸಿದಳು. ಒದಗಿ ಬರುವ ಕಾಲ ಬಂದರೆ ಎಲ್ಲವೂ ಒಂದಕ್ಕೊಂದು ಹೊಂದಿಕೊಂಡೇ ಬರುವವು. ದಕ್ಷಪತ್ನಿಯು ಈ ರೀತಿಯಾಗಿ ಯೋಚನೆ ಮಾಡುತ್ತಿರುವಷ್ಟರಲ್ಲಿ ಅರಮನೆಯ ಹೊರಗೆ ನಾರದರ ವೀಣಾನಾದವೂ ಹರಿನಾಮಸಂಕೀರ್ತನವೂ ಕೇಳಿಸಹತ್ತಿದವು. ಅವಳು ಅದನ್ನು ಕೇಳಿ ಶುಭಲಕ್ಷಣವೆಂದಳು. ಆನಂದದಿಂದ ಅವಳ ಮುಖವು ಅರಳಿತು; ಎಷ್ಟು ಹೊತ್ತಿಗೆ ನಾರದರನ್ನು ಕಾಣುವೆನೋ ಎಷ್ಟು ಹೊತ್ತಿಗೆ ಸತಿಗೆ ತಕ್ಕ ವರನೆಲ್ಲಿರುವನೆಂದು ಕೇಳುವೆನೋ ಎಂದು ಹಾತೊರೆಯತೊಡಗಿದಳು.

ನಾರದರು ದಕ್ಷರಾಜನನ್ನು ಕಂಡು ಮಾತಾಡಿ ರಾಣೀವಾಸಕ್ಕೆ ಬಂದರು; ತಮ್ಮ ಮಂದಹಾಸ ಪ್ರಭೆಯಿಂದ ದಿಕ್ಕುಗಳನ್ನು ಬೆಳಗುತ್ತ ಶುಭ್ರಮೂರುತಿ ನಾರದರು ರಾಣಿಯ ಎದುರಿಗೆ ಬಂದು ನಿಂತರು. ರಾಣಿಯು ತಕ್ಕ ಮನ್ನಣೆಯನ್ನಿತ್ತು ವಿನಯದಿಂದ ದೂರದಲ್ಲಿ ನಿಂತುಕೊಂಡಳು. ಅತ್ತಿಗೆಯ ವಿನಯಶೀಲತೆಯನ್ನು ಕಂಡು ನಾರದರಿಗೆ ಆನಂದವಾಯಿತು. ಅವರು, "ಅಕ್ಕಾ, ಎಲ್ಲವೂ

ಕುಶಲವೇ? ವಿಶೇಷ ಸಮಾಚಾರವೇನು? ಸತಿಯು ಕಾಣಿಸುವದಿಲ್ಲವಲ್ಲ! ಎಲ್ಲಿ ದ್ದಾಳೆ!" ಎಂದು ಕೇಳಿದರು.

ಕಡೆಯ ಮಾತು ಕಿವಿಗೆ ಬಿದ್ದೊಡನೆಯೇ ರಾಣಿಯು ಮುಖಲಕ್ಷಣವು ಬದಲಾಯಿತು. ಅವಳು ತುಸು ವ್ಯಸನಾಕ್ರಾಂತ ಸ್ವರದಿಂದ "ಸತಿಯ ವಿಚಾರ ವನ್ನೇನು ಹೇಳಬೇಕು? ಅವಳ ಸ್ಥಿತಿಯು ದಿನದಿನಕ್ಕೂ ಬದಲಾಗುತ್ತ ನಡೆದಿ ರುವದು. ಪ್ರಾಪಂಚಿಕ ವಿಚಾರಗಳ ಮೇಲೆ ಅವಳಿಗೆ ಆಸ್ಥೆಯೇ ಕಡಿಮೆ. ನೀಲ ಧಾರೆಯಾಯಿತು, ನೆರೆಯು ಶಿವಮಂದಿರವಾಯಿತು, ತಾನಾಯಿತು. ಅವಳಿಗೊಬ್ಬ ಜೋಗಿಣಿಯು ಗಂಟುಬಿದ್ದಿದ್ದಾಳೆ. ಅವಳಿಂದಲೇ ಇಷ್ಟೆಲ್ಲ ಅನರ್ಥವಾಯಿತೆನ್ನ ಬೇಕು. ಆದರೆ ಮಾಡಬೇಕೇನು? ಆ ಜೋಗಿಣಿಯು ಇಲ್ಲಿಂದ ಹೊರಟರೆ ಸತಿಯೂ ಹೊರಡುವಳು. ಅವಳೊಡನೆ ಸತಿಗೆ ಅಷ್ಟೊಂದು ಆತ್ಮೀಯಭಾವನೆ. ನಾವೀಗ ಇನ್ನೊಂದು ವಿಚಾರವನ್ನು ಹುಡುಕಿದ್ದೇವೆ. ಸತಿಯನ್ನು ತಕ್ಕಮಾರ್ಗಕ್ಕೆ ಹಚ್ಚಬೇಕಾದರೆ ಅವಳಿಗೆ ವಿವಾಹಮಾಡಬೇಕು. ಆದರೆ ಅದಕ್ಕೊಂದು ಮಹಾ ವಿಪತ್ತು. ಸತಿಗೆ ತಕ್ಕ ಪತಿಯೆಲ್ಲಿ? ಅದರಿಂದಲೇ ನಾನು ತಮ್ಮ ಆಗಮನವನ್ನು ನಿರೀಕ್ಷಿಸುತ್ತಲಿದ್ದೆನು." ಎಂದಳು.

ನಾರದರಿಗೆ ಇಷ್ಟೇ ಸಾಕಾಯಿತು; "ಇದಕ್ಕೇಕೆ ಇಷ್ಟೊಂದು ವಿಚಾರ? ಎಲ್ಲವೂ ಸಿದ್ಧವಾಗಲಿ, ವರನನ್ನು ತರುವದು ನನಗೆ ಕೂಡಿತು." ಎಂದು ಅವರು ಮಾತು ಮುಗಿಸಿ ಬಿಟ್ಟರು.

ರಾಣಿಗೆ ನಾರದರ ಮಾತಿನಿಂದ ಪರಮಾನಂದವಾಯಿತು. ಅವಳು ದಾಸಿ ಯನ್ನು ಕರೆದು "ಮಹಾರಾಜರಿಗೆ ನಾರದರು ತಮ್ಮ ದರ್ಶನವನ್ನು ಅಪೇಕ್ಷಿ ಸುತ್ತಾರೆಂದು ಹೇಳಿಬಾ" ಎಂದು ಕಳುಹಿಸಿದಳು.

ನಾರದರೂ ದಕ್ಷನೂ ದಕ್ಷಪತ್ನಿಯೂ ಒಂದೆಡೆಯಲ್ಲಿ ಕಲೆತರು. ಆಗ ಈ ರೀತಿ ಮಾತು ಕಥೆಗಳು ನಡೆದವು:—

**ನಾರದ:**—ನಮ್ಮ ಸತಿಗೆ ಒಬ್ಬ ಉತ್ತಮ ಪತಿಯನ್ನು ನೋಡಿ ಬಂದಿರು ವೆನು. ಅಂಥ ಯೋಗ್ಯನಾದ ವರನನ್ನು ನಾನು ಇನ್ನೆಲ್ಲಿಯೂ ನೋಡಲಿಲ್ಲ.

ದಕ್ಷರಾಜನಿಗೆ ಆನಂದವಾಯಿತು. ಅವನು ಕುತೂಹಲದಿಂದ "ಅಂಥ ವರನಾರು?" ಎಂದು ಕೇಳಿದನು.

**ನಾರದ:**—ಕೈಲಾಸಗಿರಿಯ ರಾಜನು. ಇದನ್ನು ಕೇಳಿ ದಕ್ಷರಾಜನ ಮುಖದ ಮೇಲಿನ ಆನಂದದ ಕಳೆಯು ಇಳಿದದ್ದು ಒಡೆದು ಕಾಣಿಸಿತು. ಅವನು ನಾರದರನ್ನು ಏನನ್ನೋ ಕೇಳಬೇಕೆಂದು ಬಾಯಿಯನ್ನು ಎತ್ತುವಷ್ಟರಲ್ಲಿ...

**ರಾಣಿಯು:**—ಕೈಲಾಸಗಿರಿ! ಎಷ್ಟು ದೂರ! ನಮ್ಮ ಸತಿಯನ್ನು ಅಷ್ಟು ದೂರ ಕೊಟ್ಟರೆ ಮೇಲೆ ಮೇಲೆ ಹೋಗುಬರುವದೆಂತು? ಅವಳಲ್ಲಿ; ನಾವಿಲ್ಲಿ, ಹೀಗಾಗುವದು. ಅವಳ ಸುಖದ ಸುದ್ದಿಯನ್ನಾದರೂ ಮೇಲೆ ಮೇಲೆ ಕೇಳುವದು ಬೇಡವೇ? ಮೇಲಾಗಿ ಕರೆಯಿಸುವದಕ್ಕೂ ಕಳುಹಿಸುವದಕ್ಕೂ ಬಹಳ ತೊಂದರೆ.

ನಾರದರಿಗೆ ನಗೆಬಂದಿತು. ಸೈ! ತಾಯಿಗೆ ಬೇಕಾದ ಮಾತೇ ಇದು. ಮಗಳು ಮನೆಯ ನೆರೆಯಲ್ಲಿಯೇ ಇದ್ದರೆ ಅವಳಿಗೆ ಆನಂದ. ನಿಮಗೆ ನನ್ನ ದೊಂದು ಪ್ರಶ್ನೆ. ನೀವು ಸತಿಯು ಹೋಗುಬರುವದಕ್ಕೆ ಅನುಕೂಲವಾಗುವಂತೆ ಸಮೀಪದಲ್ಲಿ ಹೇಗಾದರೂ ಇರಬೇಕನ್ನುವಿರಾ? ಯೋಗ್ಯನಾದ ಪತಿಯೊಡನೆ ದೂರದಲ್ಲಿಯೇ ಆದರೂ ತನ್ನ ಮನೆಯಲ್ಲಿ ಆನಂದದಿಂದ ಇರಬೇಕನ್ನುವಿರಾ? ಸತಿಯು ಪತಿಯೊಡನೆ ಆನಂದದಿಂದ ತನ್ನ ಮನೆಯಲ್ಲಿಯೇ ಇದ್ದುಕೊಂಡರೆ ಅದರಿಂದ ನಿಮಗಾಗುವ ಹಾನಿಯಾದರೂ ಏನು?

**ಅರಸನೂ ಅರಸಿಯೂ:**—ಸರಿ. ಆಗಬಹುದು. ಎಲ್ಲಿಯಾದರೂ ಮಗಳು ಸುಖವಾಗಿ ಇರಬೇಕೆಂಬದೇ ನಮ್ಮ ಕೋರಿಕೆ. ಆ ಸುಖವನ್ನು ಕಣ್ಣಾರೆ ಕಾಣಬೇಕೆಂಬದೂ ನಮ್ಮ ಬಯಕೆಯಾಗಿತ್ತು. ಆದರೆ ಅದಕ್ಕನುಕೂಲವಾಗ ದಿದ್ದರೆ ಅವಳು ಸುಖದಿಂದಿರುವದನ್ನು ಕಿವಿಯಾರೆ ಕೇಳಿಯಾದರೂ ಆನಂದಪಡು ವೆವು. ಮಗಳು ತೊಡೆಯ ಮೇಲೆ ಅಳುತ್ತ ಕೂಡ್ರುವದಕ್ಕಿಂತ ಗುಡ್ಡದ ಮೇಲೆ ಆನಂದದಿಂದ ತಿರಗುತ್ತಿದ್ದರೂ ಆಗಬಹುದು.

**ನಾರದ:**—ಸರಿ. ಸರಿ. ಇನ್ನೇನು ನಿಮ್ಮ ಬಯಕೆ?

**ದಕ್ಷ:**—ವರನ ವಿದ್ಯಾಬುದ್ಧಿಗಳು ಎಂತಿರುವವು?

**ನಾರದ:**—ಆದನ್ನೇನು ಹೇಳಲಿ? ವೇದಶಾಸ್ತ್ರಪುರಾಣ ಮಂತ್ರತಂತ್ರ ಗಳಲ್ಲಿ ಅವನರಿಯದಿರುವದು ಇಲ್ಲವೇ ಇಲ್ಲ. ಈ ವಿಷಯದಲ್ಲಿ ಎರಡನೇ ನಿದರ್ಶ ನವೇತಕ್ಕೆಬೇಕು? ಮಹರ್ಷಿ ವಸಿಷ್ಠನು ವೇದಗಳ ತತ್ವವನ್ನೂ ಪರಶುರಾಮನು ಧನುರ್ವೇದವನ್ನೂ, ಬಹಳವೇಕೆ? ನಾನೇ ಗಂಧರ್ವವೇದವನ್ನೂ ಅವನಿಂದಲೇ

ಕಲಿತುಕೊಂಡೆವಲ್ಲವೇ? ದಕ್ಷನ ಮೋರೆಯು ಆನಂದದಿಂದ ಅರಳಿತು. ಅವನು ಮತ್ತೆ ನಾರದರನ್ನು ಕುರಿತು ವರನ ಬಲವೀರ್ಯಗಳೆಂತಿರುವವು? ಎಂದು ಪ್ರಶ್ನೆ ಮಾಡಿದನು.

**ನಾರದ:**— ಸಕಲ-ಲೋಕಪ್ರಸಿದ್ಧವಾದ ಪಿನಾಕಧನುಸ್ಸು ಆತನ ಕೈಯಲ್ಲಿ ಹಗಲಿರುಳು ಇರುವದು. ಮೂರು ಲೋಕಗಳಲ್ಲಿಯೂ ಅದರ ಹೆದೆಯೇರಿಸುವದೂ ಕೂಡ ಯಾರಿಂದಲೂ ಆಗದು. ಕಂಡಿರಾ! ಅವನು ಯಾರಿಗೂ ಹಣಿಯದ ತ್ರಿಪುರಾಸುರ ಗಜಾಸುರರನ್ನು ಅನಾಯಾಸವಾಗಿ ಕೊಂದು ಕೆಡಹಿದನು!

**ಅರಸಿ:**—ನಾರದರೇ, ವರನ ಆಕಾರರೂಪಗಳೆಂತಿರುವವು?

**ನಾರದ:**—ಕೇಳುವದೇನು? ಸಾಲವೃಕ್ಷದಂತೆ ಎತ್ತರವಾದ ಆ ನಿಲುವಿಕೆಯೂ ಮೊಳಕಾಲವರೆಗೆ ಉದ್ದವಾದ ಆ ತೋಳುಗಳೂ ಕಿವಿಯವರೆಗೆ ವಿಶಾಲವಾದ ಆ ಕಣ್ಣುಗಳೂ ಬೆಳ್ಳಿಯಂತೆ ಬಿಳಿದಾದ ಆ ಮೈಯ ಹೊಳವೂ ಆ ಸುಂದರ ಪ್ರಸನ್ನಮುಖವೂ ನೋಡುವವರನ್ನು ಮರುಳುಗೊಳಿಸುವವು. ಅವನಿಗೆ ತಕ್ಕ ಸುಂದರ ಕನ್ನೆಯು ಇಲ್ಲವೆಂದರೂ ಸಲ್ಲುವದು. ಆದರೂ ನಮ್ಮ ಸತಿಯು ಅವನಿಗೆ ತಕ್ಕ ಸತಿಯೆನ್ನಬಹುದು.

**ಅರಸಿ:**—ನಾರದರೇ, ವರನ ಐಶ್ವರ್ಯವೆಷ್ಟು? ನಮ್ಮ ಸತಿಗೇನಾದರೂ ನಾಲ್ಕು ಆಭರಣಗಳನ್ನಿಡುವಂತಿರುವನೇ?

**ನಾರದ:**—ದೇವೀ, ಏನು ಹೇಳಲಿ? ಆತನು ರತ್ನಗರ್ಭ ಕೈಲಾಸಗಿರಿಯ ಒಡೆಯನು. ಧನಾಧಿಪತಿ ಕುಬೇರನು ಆತನ ಮಿತ್ರನು. ಕುಬೇರನ ಹೆಸರನ್ನು ಕೇಳದವರಾರು? ಅವನ ಬೊಕ್ಕಸದಲ್ಲಿರುವಷ್ಟು ವಜ್ರ-ವೈಡೂರ್ಯ- ಮರಕತ-ಮಾಣಿಕ್ಯಾದಿ ರತ್ನಗಳು ಇನ್ನೆಲ್ಲಿವೆ? ಹೀಗಿದ್ದು ನಿನ್ನ ಮಗಳಿಗೆ ಎಷ್ಟು ಅಲಂಕಾರಬೇಕು?

**ಅರಸಿ:**—ವರನ ಬಳಗವೆಷ್ಟು? ಮನೆಯಲ್ಲಿ ತಾಯಿಯಿರುವಳೇ? ಅತ್ತಿಗೆ ನಾದಿನಿಯರಾರಾದರೂ ಇರುವರೇ?

**ನಾರದ:**— ಇದೊಂದು ಹೆಣ್ಣುಕೊಡುವ ಹೆಂಗಸರಿಗೆ ಬೇಕಾದ ಮಾತು. ನಿಮ್ಮ ಸತಿಗೆ ಅತ್ತೆಯಿಲ್ಲ, ಕಾಡುವ ಅತ್ತಿಗೆಯರಿಲ್ಲ, ಮದುವೆಯಾದ

ಮರುದಿನವೇ ನಿಮ್ಮ ಮಗಳು ಕೈಲಾಸಗಿರಿಯ ಯಜಮಾನಿತಿಯಾಗುವಳು. ಅವಳೇ ಮನೆತನದ ಸರ್ವೇಶ್ವರಿ! ಇನ್ನೇನು ಬೇಕು?

ರಾಣಿಯು ನಾರದರ ಮಾತುಗಳನ್ನು ಕೇಳಿ ಆನಂದದಿಂದ ಅವರ ಮುಖ ವನ್ನು ನೋಡಿದಳು. ನಾರದರದಿನ್ನೊಂದು ಗುಣ. ಮಾತು ಮಾತಿನ ಮೇಲೆ ಆಕಾಶಕ್ಕೆ ಮುಟ್ಟಿಸಿ ಮುಂದಿನ ಮಾತಿನಲ್ಲಿಯೇ ಪಾತಾಳಕ್ಕೆ ಕೆಡಹುವ ಯುಕ್ತಿಯು ನಾರದರಿಗೆ ಸಂಪೂರ್ಣವಾಗಿ ಸಾಧಿಸಿತ್ತು. ಅವರು ಪುನಃ "ದೇವೀ, ವರನಲ್ಲಿ ದೋಷವೂ ಸ್ವಲ್ಪವಿದೆ. ಇದ್ದ ದೋಷಗಳನ್ನೆಂತು ಮುಚ್ಚಿ ಡಲಿ? ವರನಿಗೆ ಸಂಸಾರದಲ್ಲಿ ಆಸ್ಥೆ ಕಡಿಮೆ. ಆದದರಿಂದ ಅವನಿಗೆ ಅರಮನೆ ಯೂ ಒಂದೇ, ಸ್ಮಶಾನವೂ ಒಂದೇ; ಚಂದನವೂ ಒಂದೇ, ಚಿತಾಭಸ್ಮವೂ ಒಂದೇ. ಅವನು ಸದಾ ಚಿಂತಾಗ್ರಸ್ತನು, ಆದರೆ ಅವನಿಗೆ ಸ್ವಂತಹಿತಕ್ಕಾಗಿ ಚಿಂತೆಯಿಲ್ಲ; ಜಗತ್ತಿನ ಕಲ್ಯಾಣಕ್ಕಾಗಿ ಅವನು ಹಗಲಿರುಳು ಚಿಂತಿಸುತ್ತಿರ ಬೇಕಾಗುವದು. ಅವನಿಗೆ ರತ್ನಾಲಂಕಾರಗಳು ಬೇಕಾಗಿಲ್ಲ; ಹಳೆಯ ಮೂಳೆ ಗಳಾದರೂ ನಡೆಯುವವು. ಅವನಿಗೆ ಅಮೃತಾನ್ನವಾದರೂ ಅಷ್ಟೇ; ಕಾಲ ಕೂಟ-ವಿಷವಾದರೂ ಅಷ್ಟೇ. ಪರೋಪಕಾರವ್ರತಿಯಾಗಿರುವನು. ಪರೋಪ ಕಾರಕ್ಕಾಗಿ ಅವನು ಕಾಲಕೂಟ-ವಿಷವನ್ನು ಪಾನಮಾಡಿದನು. ಈ ಎಲ್ಲ ಕಾರ ಣಗಳಿಂದ ಅವನು ರಾಜನಾಗಿಯೂ ಭಿಕ್ಷುಕನು; ಗೃಹಸ್ಥನಾಗಿಯೂ ಸನ್ಯಾ ಸಿಯು. ಎಲ್ಲವೂ ಇದ್ದು ಏನೂ ಇಲ್ಲದವನು!

ಸರಿ. ರಾಣಿಯು ಆಕಾಶಕ್ಕೆ ಮುಟ್ಟಿದ್ದವಳು ಅದೇ ನಾರದರ ಮಾತಿ ನಿಂದಲೇ ಪಾತಾಳಕ್ಕೆ ಬಿದ್ದುಬಿಟ್ಟಳು; ನಾರದರು ಇಷ್ಟು ಹೊತ್ತಿನವರೆಗೆ ಹೇಳಿದ ವರನ ರೂಪ-ಗುಣ-ಐಶ್ವರ್ಯಗಳ ವರ್ಣನೆಯನ್ನು ಕೇಳಿ ಆನಂದಿತಳಾಗಿದ್ದಳು. ಆದರೆ ಒಂದೇ ಒಂದು ಮಾತಿನಿಂದ ಅವಳ ಆನಂದವೆಲ್ಲ ಅಳಿಸಿಹೋಯಿತು. ವರನು ಸನ್ಯಾಸಿ! ಇಂಥ ಸನ್ಯಾಸಿಗೆ ಮಗಳನ್ನು ಕೊಟ್ಟು ಮಾಡಬೇಕೇನು? ಸನ್ಯಾಸಿಯ ವಿವಾಹಕ್ಕೆ ಜುಟ್ಟುಜನಿವಾರಗಳೂ ಹೊರಗಿನಿಂದ ಬರಬೇಕು. ಎ[illegible] ದ್ದರೇನಾಯಿತು? ರಾಣಿಯ ಮನಸ್ಸು ಇಳಿದುಹೋಯಿತು. ದಕ್ಷರಾಜನಿಗೂ ಕೊಂಚ ಅಸಮಾಧಾನವಾಯಿತು. ಇದನ್ನು ನೋಡುತ್ತ ಬಳಿಯಲ್ಲಿಯೇ ನಿಂತ ನಿಪುಣ ದಾಸಿಯೊಬ್ಬಳು ಅವರ ಮನಸ್ಸನ್ನು ಸಮಾಧಾನಪಡಿಸುವಂತೆ ಮಾತಾ[illegible]

ದಳು. ಅವಳು ಅರಸಿಯ ಮುಖವನ್ನು ನೋಡಿ, " ದೇವೀ, ಚಿಂತಿಸುವಿರೇಕೆ? ಸತಿಯ ಯೋಗ್ಯತೆಯನ್ನು ತಾವು ಅರಿತಿರುವಿರಲ್ಲವೇ? ಅವಳು ಈಗ ಸಂಸಾರದಲ್ಲಿ ಅನಾದರವನ್ನು ತೋರಿಸುವಳಾದರೂ ಇಚ್ಛಾನುರೂಪನಾದ ಪತಿಯು ದೊರೆತರೆ ಅವಳು ಸನ್ಯಾಸಿಯನ್ನೂ ಸಂಸಾರಿಯನ್ನಾಗ ಮಾಡುವದರಲ್ಲಿ ಸಂಶಯವಿಲ್ಲ. ಲಗ್ನವಂತೂ ಆಗಲಿ, ನಮ್ಮ ಸತಿದೇವಿಯು ಒಂದೇ ಒಂದು ತಿಂಗಳಲ್ಲಿ ಸನ್ಯಾಸಿ ಶಿವನನ್ನು ಉತ್ತಮ ಸಂಸಾರಿಯನ್ನಾಗಿ ಮಾಡುವದರಲ್ಲಿ ಸಂಶಯವಿಲ್ಲ. ಪತಿಯನ್ನು ಸನ್ಯಾಸಿಯನ್ನು ಮಾಡುವದೂ ಸಂಸಾರಿಯನ್ನು ಮಾಡುವದೂ ಸತಿಯ ಕೈಯಲ್ಲಿರುವದು. " ಎಂದಳು.

ಇದನ್ನು ಕೇಳಿ ಅರಸಿಯು ಸಮಾಧಾನವನ್ನು ಹೊಂದಿದಳು. ಅವಳು:— ನಾರದರೇ, ಎಲ್ಲ ಗುಣಗಳೂ ಏಕತ್ರವಾಗಿ ದೊರೆಯುವದು ಅಸಂಭವವು. ದೋಷಗಳಿಗಿಂತಲೂ ಗುಣವು ಹೆಚ್ಚಾಗಿರಬೇಕು. ಯೋಗ್ಯನಾದ ವರನನ್ನು ನೋಡಿ ಮಗಳನ್ನು ಕೊಡುವದು ತಾಯ್ತಂದೆಗಳ ಕರ್ತವ್ಯವು. ಹೆಚ್ಚಿನದು ಆಗುಹೋಗುವದು ಅವರವರ ದೈವವನ್ನು ಅವಲಂಬಿಸಿರುವದು. ಸತ್ಕುಲಪ್ರಸೂತನೂ ಸದ್ಗುಣಿಯೂ ಶ್ರೀಮಂತನೂ ಸುಂದರನೂ ಆದವನಿಗೆ ಮಗಳನ್ನು ಕೊಡಬೇಕೆಂಬದೇ ನನ್ನ ಬಯಕೆ. ಮೇಲೆ ಮಹಾರಾಜರವರ ಹೇಳಿಕೆಯೇನಿರುವದೋ ಕೇಳಬೇಕು. " ಎಂದಳು.

**ದಕ್ಷ**:—ಅರಸೀ, ನನ್ನನ್ನೇನು ಕೇಳುವದು? ವಿಧಿಯ ಇಚ್ಛೆ. ಋಣಾನುಬಂಧವಿಲ್ಲದಿದ್ದರೆ ಹೊಂದಿಸುವದು ನಮ್ಮಿಂದಾಗದು. ಋಣವಿದ್ದರೆ ಬಿಡಿಸುವದೂ ನಮಗೆ ಸಾಧ್ಯವಿಲ್ಲ. ನನಗೇಕೋ ಈ ಸ್ಥಳವು ಪ್ರಶಸ್ತವೆಂದು ತೋರುವದು. ನಿನ್ನ ಮನಸಿಗೂ ಬಂದರೆ ಇದೇ ವರನನ್ನು ಗೊತ್ತುಮಾಡುವ.

ಹೆಚ್ಚಿನದೇನೂ ವಿಚಾರ ನಡೆಯಲಿಲ್ಲ. ಕೈಲಾಸಪತಿ ಶಂಕರನಿಗೆ ಸತಿಯನ್ನು ಕೊಡುವದು ನಿರ್ಣಯವಾಯಿತು. ಮುಹೂರ್ತವೂ ನಿರ್ಣಯವಾಯಿತು. ಶಂಕರನನ್ನು ಸಮಾಧಾನಪಡಿಸಿ ಒಪ್ಪಿಸಿ ಲಗ್ನಕ್ಕೆ ಕರೆತರುವದು ನಾರದರ ಕೆಲಸವೆಂದು ಮೊದಲೇ ನಿರ್ಣಯವಾಗಿತ್ತು. ದಕ್ಷರಾಜನು ಮದುವೆಯ ಸಿದ್ಧತೆಯನ್ನು ಒಳ್ಳೇ ವೈಭವದೊಡನೆ ಆರಂಭಿಸಿದನು.

## ಐದನೆಯ ಪರಿಚ್ಛೇದ.

## ವಿವಾಹೋತ್ಸವ.



ಕೈಲಾಸಪತಿ ಶಂಕರನೇ ಸತಿಯ ಪತಿಯೆಂದು ದಕ್ಷರಾಜನೂ ರಾಣಿಯೂ ನಾರದರೂ ಸರ್ವಾನುಮತದೊಡನೆ ನಿರ್ಣಯಿಸಿದರು. ಈ ಮಾತು ಅಲ್ಲಿರುವ ದಾಸಿಯರಿಗೂ ತಿಳಿಯಿತು. ಸತಿಯು ಪ್ರೀತಿಯವಳಾದ ಓರ್ವ ದಾಸಿಯು ಓಡುತ್ತ ಹೋಗಿ “ಅಕ್ಕಾ, ಸತೀ, ನಿನ್ನ ಮದುವೆಯು ಗೊತ್ತಾಯಿತು; ಕೈಲಾಸಪತಿ ಶಂಕರನು ನಿನ್ನ ಪತಿಯುಂತೆ! ಸತಿಗೆ ತಕ್ಕ ಪತಿದೇವನು. ಪತಿಗೆ ಪ್ರಪಂಚ ಬೇಡ; ಸತಿಗೆ ಸಂಸಾರಬೇಡ.” ಎಂದು ಪರಿಹಾಸಮಾಡಿ ಮಾತಾಡಿದಳು. ಪರಿಚಾರಿಕೆ **ವಿರಕ್ತೆ**ಯ ದಿನದ ಅಭ್ಯಾಸವಿದು. ಇವಳು ಬಲು ಕುಚೇಷ್ಟಗಾರ್ತಿಯು. ಮಾತುಮಾತಿಗೂ ಚೇಷ್ಟೆಯೇ ಬಹಳ. ಸತಿಗೂ ಇವಳ ಚೇಷ್ಟೆಯಿಂದ, ಒಮ್ಮೊಮ್ಮೆ ನಾಚಿಕೆಯೆನಿಸುವದು, ಒಮ್ಮೊಮ್ಮೆ ಬೇಸರವಾಗುವದು, ಒಮ್ಮೊಮ್ಮೆ ತುಸು ಕೋಪವೂ ಬರುವದು. ಆಗ “ಎಂಥ ಕುಚೇಷ್ಟೆಯಿದು, ಹೊತ್ತಿಲ್ಲ; ವೇಳೆಯಿಲ್ಲ; ಯಾವಾಗಲೂ ಚೇಷ್ಟೆಯೇ” ಎಂದಿಷ್ಟೇ ನುಡಿಯುವಳು. ಸತಿಯ ಕೋಪದ ಮಾತಿದು! ಎಂಥ ಕೋಮಲ ಹೃದಯದವಳಿವಳು? ಸತಿಯು ದಾಸಿಯ ಈಗಿನ ಮಾತಿನಿಂದ ಸಿಟ್ಟಿಗೇಳಲಿಲ್ಲ; ಆನಂದವನ್ನೂ ತೋರ್ಪಡಿಸಲಿಲ್ಲ. ನಾಚಿಕೆಯ ಛಾಯೆಯಿಂದ ಕೂಡಿದ ಮನಃಶಾಂತಿಯುಕ್ತವಾದ ಕಳೆಯು ಅವಳ ಮುಖದಲ್ಲಿ ಒಡೆದು ಕಾಣಿಸಿತು. ಹೃದಯದ ವಿಕಾರಗಳ ಪ್ರತಿಬಿಂಬವನ್ನು ತೋರಿಸುವ ವಜ್ರದ ದರ್ಪಣವೇ ಮುಖವು. ಸತಿಯ ಆ ಸುಕುಮಾರವಾದ ಮುಖದರ್ಪಣದಲ್ಲಿ ಪ್ರತಿಬಿಂಬಿತವಾದ ವಿಚಾರದ ಛಾಯೆಯು ಅವಳ ಪ್ರೀತಿಯ ದಾಸಿಗೆ ಕಾಣಿಸದಿರಲಿಲ್ಲ. ಅವಳು ಆನಂದದಿಂದ:—“ಅಕ್ಕಾ, ಸತೀ, ನೀನಿಂದು ಧನ್ಯಳಾದೆ! ಈ ಲೋಕದಲ್ಲಿ ಯಾವ

ಬಾಲೆಯು ಇಚ್ಛಿತ ಯೋಗ್ಯಪತಿಯನ್ನು ಪಡೆಯುವಳೋ ಅವಳೇ ಧನ್ಯಳು. ಅನುರೂಪನಾದ ಪತಿಯು ದೊರೆಯದಿದ್ದರೆ ಹೆಣ್ಣುಮಕ್ಕಳ ಪ್ರಪಂಚದ ಗೋಳಾಟವನ್ನೇನು ಹೇಳಬೇಕು? ವಿವಾಹವು ಹೆಣ್ಣುಮಕ್ಕಳಿಗೆ ಪುನರ್ಜನ್ಮ ದಾಯಕವಾಗಿರುವದು. ಅವರ ಆ ದ್ವಿತೀಯಜನ್ಮಕಾಲದಲ್ಲಿ ಅನುರೂಪನಾದ ಪತಿಯು ದೊರೆತುಬಿಟ್ಟರೆ ಅವರ ಆಯುಷ್ಯವೆಲ್ಲಾ ಆನಂದದಿಂದ ಹೋಗುವದು; ಇಲ್ಲವಾದರೆ ಅವರು ಈ ಲೋಕದಲ್ಲಿಯೇ ಪ್ರತ್ಯಕ್ಷ ನರಕವನ್ನು ಅನುಭವಿಸಬೇಕಾಗುವದು. ಹಡೆದ ತಾಯಿತಂದೆಗಳು ಈ ಮಾತನ್ನು ನೆನಪಿನಲ್ಲಿಟ್ಟಿರಬೇಕು. ತಾವು ಮಾಡುವಷ್ಟನ್ನೆಲ್ಲಾ ಮಾಡಿ ಕೊನೆಗೆ ಅವಳ ಹಣೆಯಲ್ಲಿದ್ದದ್ದು ಆಯಿತು, ನಾವೇನು ಮಾಡಬೇಕು? ಎಂದು ಕೈಕೊಡೆಯುವ ತಾಯ್ತಂದೆಗಳು ಎಲ್ಲೆಲ್ಲಿಯೂ ಕಂಡುಬರುವರು. ಆದರೆ ಈ ಮಾತಿನಲ್ಲಿ ಅರ್ಥವಿಲ್ಲ. ಅನುರೂಪನಾದ ಪತಿಯೆಂದರೆ ಶ್ರೀಮಂತನೆಂದರ್ಥವಲ್ಲ, ಸುಸ್ವರೂಪಿಯೆಂದರ್ಥವಲ್ಲ. ಸತಿಯಾಗತಕ್ಕವಳ ನಿಜವಾದ ಪ್ರೇಮಕ್ಕೆ ಯಾವಾತನು ಪಾತ್ರನಾಗಿರುವನೋ ಅವನೇ ಅವಳಿಗೆ ಅನುರೂಪಪತಿಯು. ಅಸ್ಥಿರವಾದ ಶ್ರೀಮಂತಿಕೆಯೂ ತಾರುಣ್ಯದ ಭರದಲ್ಲಿ ತೋರಿಯಡಗುವ ಸೌಂದರ್ಯವೂ ಪ್ರಪಂಚದಲ್ಲಿ ನಿಜವಾದ ಸುಖವನ್ನಂತೂ ಉಂಟುಮಾಡಲಾರವು. ಪತಿಪತ್ನಿಯರ ಅಂತರಂಗದ ಐಕ್ಯತೆಯಿಂದಲೇ ಈ ಪ್ರಪಂಚದಲ್ಲಿ ನಿಜವಾದ ಸುಖವುಂಟಾಗುವದು. ಧನ್ಯ! ತಾಯೀ ನೀನಿಂದು ಧನ್ಯಳಾದೆ!" ಎಂದಳು.

ಸತಿಯು ದಾಸಿಯ ಈ ಮಾತುಗಳನ್ನು ಕೇಳಿ ಆನಂದದಿಂದ ಅವಳನ್ನು ಅಪ್ಪಿಕೊಂಡಳು. ಅಷ್ಟರಲ್ಲಿ ರಾಣಿಯು ಅಲ್ಲಿಗೆ ಬಂದು "ಓಹೋ, ವಿರಕ್ತೇ, ನೀನಾಗಲೇ ಬಂದು ಸತಿಗೆ ಎಲ್ಲ ವಿಚಾರಗಳನ್ನೂ ಹೇಳಿಬಿಟ್ಟಂತೆ ಕಾಣುತ್ತದೆ. ಸತೀ, ಯಾಕಮ್ಮಾ! ಕೈಲಾಸಪತಿಯು ನಿನಗೆ ಅನುರೂಪನಾದ ಪತಿಯೆಂದು ನಾವೆಲ್ಲರೂ ನಿರ್ಣಯಿಸಿದೆವು. ನಿನ್ನ ಹೇಳಿಕೆಯೇನು?" ಎಂದು ಮುಗುಳ್ನಗೆ ನಕ್ಕು ಕೇಳಿದಳು.

ಸತಿಯು ಮಿತಭಾಷಿಣಿಯಾಗಿದ್ದರೂ ತಾಯಿಯೊಡನೆ ಮಾತ್ರ ಬೇಕಾದ ಹಾಗೆ ಮಾತಾಡುವಳು. ಅವಳು "ಮದುವೆ ಮಾಡತಕ್ಕವರು ನೋಡಿಕೊಂಡರಾಯಿತು. ನನ್ನನ್ನೇಕೆ ಪುನಃ ಕೇಳುವದು?" ಎಂದಳು.

ಸತಿಯ ಮಾತಿನಲ್ಲಿ ಎರಡರ್ಥವಿದ್ದಿತು. "ನನ್ನನ್ನೇಕೆ ಪುನಃ ಕೇಳುವದು" ಎಂಬದು ಮುಖ್ಯಾರ್ಥಸೂಚಕವಾಗಿದ್ದಿತು. ತಾಯಿಯು ಇದನ್ನರಿತು

ಕೊಂಡಳು. ಆದರೂ “ಸತೀ, ಇದನ್ನೇನು ಹೇಳುವೆ? ಮದುವೆಯನ್ನು ಮಾಡತಕ್ಕವರು ನಾವೇ ಆದರೂ ಅದರ ಪರಿಣಾಮವನ್ನು ಅನುಭವಿಸತಕ್ಕವಳು ನೀನಾಗಿರುವೆ. ಅದರಿಂದಲೇ ನಿನ್ನ ಅನುಮತಿಯನ್ನು ಕೇಳಬೇಕಾಯಿತು. ತಾಯ್ತಂದೆಗಳು ಮಕ್ಕಳ ಅನುಮತಿಯನ್ನು ಕೇಳದೆ ಮದುವೆಯನ್ನು ಮಾಡುವದು ಸರ್ವಥಾ ಸರಿಯಲ್ಲ. ತಟ್ಟನೆ ಹೇಳಿಬಿಡು. ನಾರದರು ಕೈಲಾಸಕ್ಕೆ ಹೋಗಲು ಹೊರಟಿರುವರು. ನಿನ್ನ ಅನುಮೋದನೆಯನ್ನು ಪಡೆದುಕೊಳ್ಳಲು ನಿಂತಿದ್ದಾರೆ. ಅವರಿಗೆ ನಿರ್ಣಯವನ್ನು ಹೇಳಬೇಕಾಗಿರುವದು.” ಎಂದು ಮಂದಹಾಸದೊಡನೆ ನುಡಿದಳು.

ಸತಿಯು ತಾಯಿಯ ಈ ತರದ ಒಗಟಿನ ಉತ್ತರವನ್ನು ಸ್ಪಷ್ಟವಾಗಿ ಹೇಳಿಬಿಡಬೇಕೆಂದು ಒಮ್ಮೆ ಯೋಚಿಸಿದಳು. ಮತ್ತೊಮ್ಮೆ ವಿಚಾರಮಾಡಿ “ಮಾಡುವದನ್ನೆಲ್ಲಾ ಮಾಡಿ ಈಗ ಉಪಚಾರಕ್ಕಾಗಿ ನನ್ನನ್ನು ಕೇಳುವದು ಬೇಡ. ನೀವು ಈಗ ಮಾಡಿದ ವಿಚಾರವನ್ನೇ ಕೊನೆಯವರೆಗೂ ನಡೆಯಿಸಬೇಕು. ನಿಮಗೆ ನನ್ನ ಅನುಮೋದನೆಯು ಮಹತ್ವದ್ದಾಗಿದ್ದರೆ ಯಾವದನ್ನೂ ಮೊದಲೇ ವಿಚಾರಮಾಡಬೇಕಿತ್ತು. ಈಗೇನು ಕೇಳುವಿರಿ.” ಎಂದು ಹೇಳಿಬಿಟ್ಟಳು. ಸತಿಯು ಬಾಯಿಯಲ್ಲಿ ಆಡಿದ ಮಾತಿನಲ್ಲಿ ವ್ಯಂಗಾರ್ಥವಿದ್ದರೂ ಅವಳ ಮುಖಲಕ್ಷಣದ ಮೇಲಿಂದ ಆ ವ್ಯಂಗಾರ್ಥದಲ್ಲಿ ಯಾವದನ್ನು ಗ್ರಹಿಸಬೇಕೆಂಬದು ತಾಯಿಗೆ ತಿಳಿಯದಿರಲಿಲ್ಲ. ಅವಳು “ಒಳ್ಳೇದಮ್ಮಾ! ಹಾಗೆಯೇ ಮಾಡುವೆವು.” ಎಂದು ನುಡಿದು ಹೊರಟುಹೋದಳು. ಪೌರೋಹಿತ್ಯಾಚಾರವನ್ನು ಕೈಕೊಂಡ ನಾರದರು ಕೈಲಾಸಗಿರಿಗೆ ಹೋಗಿ ಶಂಕರನ ಅನುಮತಿಯನ್ನು ಪಡೆದುಕೊಂಡ ಸಂಗತಿಯನ್ನು ದಕ್ಷಪುರಿಗೆ ತಿಳಿಸಿದರು. ವಿವಾಹವು ಈಗ ನಿಜವಾಗಿ ನಿರ್ಣಯವಾದಂತಾಯಿತು.

ದಕ್ಷರಾಜನು ಮಹಾ ವೈಭವದೊಡನೆ ಸತಿಯ ವಿವಾಹಸಮಾರಂಭದ ಸಿದ್ಧತೆಯನ್ನು ಮಾಡತೊಡಗಿದನು. ಅರಮನೆಯೂ ದಕ್ಷಪುರಿಯೂ ಪರಿಪರಿಯ ಗುಡಿತೋರಣಗಳಿಂದ ಅಲಂಕರಿಸಲ್ಪಟ್ಟವು. ಸಕಲ ದೇಶಗಳಿಗೂ ಆಮಂತ್ರಣ ಪತ್ರಿಕೆಗಳನ್ನು ಕಳುಹಿಸಿದರು. ಸಕಲ ದೇವತೆಗಳೂ ಸತಿಯ ವಿವಾಹಕ್ಕೆ ಆಮಂತ್ರಿತರಾದರು. ದಕ್ಷರಾಜನು ಮೊದಲು ಇಪ್ಪತ್ತೇಳು ಮಕ್ಕಳ ಮದುವೆಯನ್ನು ಮಾಡಿದ್ದನು. ಆದರೆ ಯಾವ ಮದುವೆಗೂ ಇಷ್ಟೊಂದು ಸಿದ್ಧತೆಯನ್ನು

ಮಾಡಿರಲಿಲ್ಲ. ಸತಿಯು ಅವನ ಮೋಹದ ಗಿಣಿಯು. ಅದರಿಂದಲೇ ಅವಳ ಮದುವೆಯನ್ನು ಇಷ್ಟೊಂದು ವೈಭವದಿಂದ ಮಾಡಲು ತೊಡಗಿದ್ದನು. ಕೈಲಾಸಪತಿಯು ವರನು. ನಾರದರ ಹೇಳಿಕೆಯಿಂದ ವರಪಕ್ಷದವರ ಸಂಪತ್ತು ಅತ್ಯಧಿಕವಾದದ್ದಾಗಿತ್ತು. ವರಪಕ್ಷದವರ ಐಶ್ವರ್ಯಸಮಾರಂಭಗಳಿಗಿಂತಲೂ ತಮ್ಮವೇ ಹೆಚ್ಚಿನವಾಗಬೇಕೆಂಬದು ದಕ್ಷರಾಜನ ಅಭಿಪ್ರಾಯವಾಗಿತ್ತು. ದಕ್ಷನು ಸಕಲ ಕಾರ್ಯಗಳಲ್ಲಿಯೂ ದಕ್ಷನೇ ಸರಿ. ಆದ್ದರಿಂದಲೇ ಅವನಿಗೆ ತನ್ನ ಸಿರಿಸಂಪತ್ತು, ಅಧಿಕಾರ ವೈಭವ, ಇವುಗಳ ಬಗ್ಗೆ ಒಂದು ಬಗೆಯ ಅಹಂಭಾವವೂ ಇದ್ದಿತು. ತಾನೇ ಶ್ರೇಷ್ಠ; ತನಗೆ ಸೇರಿದವರೂ ಶ್ರೇಷ್ಠರು, ಈ ತರದ ವಿಚಾರತರಂಗಗಳು ಅವನ ಅಂತರಂಗವನ್ನು ಸದಾ ವ್ಯಾಪಿಸಿರುತ್ತಿದ್ದವು. ಆ ಅಹಂಭಾವಕ್ಕೆ ಅಲ್ಪ ಆಘಾತವಾದರೂ ಅವನಿಗೆ ಸಹನವಾಗದು.

ಸತಿಯ ವಿವಾಹವಾಗತಕ್ಕದ್ದೆಂದು ನಿರ್ಣಯವಾದ ದಿನ ದಕ್ಷಪುರಿಯಲ್ಲಿ ಜನರೆಲ್ಲರೂ ಆನಂದದಿಂದ ಉನ್ಮತ್ತರಾಗಿಬಿಟ್ಟಿದ್ದರು. ಅವರಿಗೆ ಇಂದು ಮಾತಾಡಲು ಅವಕಾಶವಿರಲಿಲ್ಲ. ಹೊಸ ಹೊಸ ಉಡಿಗೆತೊಡಿಗೆಗಳನ್ನು ಧರಿಸಿಕೊಂಡಿದ್ದರು. ಕೈಲಾಸಪುರಿಯ ಬೀಗರು ಬರುವರು; ಅವರ ಮುಂದೆ ತಮ್ಮ ವೈಭವವನ್ನು ತೋರಿಸಬೇಕು, ಎಂದು ದಕ್ಷಪುರಿಯ ಪ್ರಜೆಗಳು ತಮ್ಮ ಸಂಪತ್ತನ್ನೆಲ್ಲಾ ಕಲೆಹಾಕಿ ಮೈಮೇಲೆ ಮುಚ್ಚಿಕೊಂಡಿದ್ದರು. ಹೊಸ ಸೀರೆ, ಹೊಸ ಅಲಂಕಾರಗಳು, ಇವುಗಳಿಂದ ಹೆಂಗಸರ ಮೈ-ಕೈಗಳು ಮುಚ್ಚಿಹೋಗಿದ್ದವು. ದಕ್ಷರಾಜನ ಹೆಣ್ಣುಮಕ್ಕಳೂ ಅಳಿಯಂದಿರೂ ಸತಿಯ ವಿವಾಹಕ್ಕೆಂದು ಬಂದಿದ್ದರು. ಅವರ ಸಂಪತ್ತು ಒಬ್ಬರಿಂದೊಬ್ಬರದು ಮಿಗಿಲಾಗಿತ್ತು. ಸತಿಯ ಅಕ್ಕತಂಗಿಯರೂ ಬಗೆಬಗೆಯ ವಸ್ತ್ರಾಲಂಕಾರಗಳನ್ನು ಧರಿಸಿ ಆನಂದದಿಂದ ವರಪಕ್ಷದ ನಿಬ್ಬಣವನ್ನು ನಿರೀಕ್ಷಿಸುತ್ತಿದ್ದರು. ಪುರಜನರೆಲ್ಲರೂ ಬೀಗರ ಆಗಮನವನ್ನೇ ಎದುರುನೋಡುತ್ತಿದ್ದರು.

ವಿವಾಹಕ್ಕೆಂದು ಆಮಂತ್ರಿತರಾದ ಸಕಲರೂ ಬಂದಿದ್ದರು. ದೇವಾದಿದೇವ ಮಹಾದೇವನಿಗೆ ಆದಿಮಾಯೆಯ ಅವತಾರವಾದ ಸತೀದೇವಿಯನ್ನು ಕೊಟ್ಟು ದಕ್ಷಪುರಿಯಲ್ಲಿ ವಿವಾಹವಾಗುವದೆಂದು ಕೇಳಿ ಸಕಲ ದೇವತೆಗಳೂ ಇಂದ್ರ, ಚಂದ್ರ, ಅರುಣ, ವರುಣ, ಬ್ರಹ್ಮ, ವಿಷ್ಣು, ಯಕ್ಷ, ಗಂಧರ್ವ, ಕಿನ್ನರ ಇವರೇ ಮೊದಲಾದ ಸಕಲರೂ ಇಂದು ದಕ್ಷಪುರಿಯಲ್ಲಿ ನೆರೆದಿದ್ದರು. ಸರ್ವ

ರಿಗೂ ಚಿರಪರಿಚಿತರಾದ ನಾರದರು ಅವರವರ ಯೋಗ್ಯತಾನುಸಾರ ಆದರೋಪ ಚಾರ ಮಾಡುತ್ತಿದ್ದರು. ಊಟಮಾಡಲಿಕ್ಕೂ ಅವರಿಗೆ ಅವಕಾಶವಿಲ್ಲ.

ನಿಯಮಿತ ವೇಳೆಗೆ ಸರಿಯಾಗಿ ಕೈಲಾಸಪುರಿಯಿಂದ ವರಪಕ್ಷದವರ ನಿಬ್ಬಣವು ಬಂದಿತು. ವರನ ಬಳಗದವರ ವೇಷಭೂಷಣಗಳನ್ನೂ ಸ್ವತಃ ವರನ ವಸ್ತ್ರಾಲಂಕಾರಗಳನ್ನೂ ನೋಡಿದೊಡನೆಯೇ ಪುರಜನರ ಮನಸಿನಲ್ಲಿ ಬೇರೊಂದು ಭಾವನೆಯು ಉದಯವಾಯಿತು. ಅವರೆಲ್ಲರೂ ಎಷ್ಟುಹೊತ್ತಿಗೆ ನಿಬ್ಬಣವು ಬರುವದೋ, ಯಾವಾಗ ನಾವು ನಿಬ್ಬಣದವರನ್ನು ಕಣ್ದಣಿಯೆ ನೋಡಿ ಆನಂದ ಪಡುವೆವೋ ಎಂದು ಹಾತೊರೆಯುತ್ತಿದ್ದರು. ನಿಬ್ಬಣದವರ ಸ್ವಾಭಾವಿಕವಾದ ರೂಪಗುಣ ನಿಜವಾದ ಸಂಪತ್ತು ಇವುಗಳ ಕಡೆಗೆ ಯಾರದೂ ಲಕ್ಷ್ಯವಿರಲಿಲ್ಲ. ಅವರ ಬಾಹ್ಯಾಡಂಬರದ ಕಡೆಗೇ ಎಲ್ಲರೂ ಉತ್ಸುಕದೃಷ್ಟಿಯುಳ್ಳವರಾಗಿದ್ದರು. ಅದರಿಂದ ಅವರಿಗೆ ತುಸು ಅಸಮಾಧಾನವಾಯಿತೆಂಬದು ಅವರ ಮುಖಲಕ್ಷಣ ದಿಂದಲೇ ಕಂಡುಬಂದಿತು. ವಿವಾಹದ ಔಪಚಾರಿಕಕ್ರಮಗಳೆಲ್ಲವೂ ಶುಭ ಮುಹೂರ್ತದಲ್ಲಿ ಯಥಾರೀತಿಯಾಗಿ ಸಾಂಗವಾದವು. ಆದರೆ ಸತಿಯು ಹೊರ ತಾಗಿ ಕನ್ಯಾಪಕ್ಷದವರಲ್ಲಿ ಒಬ್ಬರ ಮುಖದಮೇಲೆಯೂ ಶುಭ್ರವಾದ ಆನಂದದ ಛಾಯೆಯಿರಲಿಲ್ಲ. ಕಾರಣವೇನು?

ನಾರದರು ವರನ ವಿಷಯವಾಗಿ ಹೇಳಿದ ಮಾತುಗಳೆಲ್ಲವೂ ನಿಜವಾಗಿದ್ದವು. ಶಂಕರನ ಪೂರ್ಣಚಂದ್ರನನ್ನು ಹೋಲುವ ಮುಖವನ್ನೂ ಬೆಳ್ಳಿಯಂತೆ ಬಿಳಿದಾದ ಆ ದೇಹವನ್ನೂ ಆನಂದವೃತ್ತಿಯನ್ನೂ ನೋಡಿ ರಾಜಕುಟುಂಬದವರೆಲ್ಲರೂ ಬೆರಗಾದರು. ಅತ್ತೆಗಂತೂ ಅಳಿಯನನ್ನು ನೋಡಿ ಪರಮಾನಂದವಾಯಿತು. ಪುರಜನರೆಲ್ಲರೂ ಸತಿಗೆ ತಕ್ಕ ಪತಿಯೆಂದು ಏಕ ಕಂಠದಿಂದ ನುಡಿದರು. ಆದರೆ ಒಂದು ಮಾತಿನಲ್ಲಿ ಮಾತ್ರ ಅವರೆಲ್ಲರಿಗೂ ಬಲು ಅಸಮಾಧಾನ ವುಂಟಾಯಿತು. ನಾರದರು ವರ್ಣಿಸಿದ ವರನ ಐಶ್ವರ್ಯದ ವಿಚಾರವು ಅವರಿಗೆ ಸುಳ್ಳೆಂದು ತೋರಿತು. ಧನಾಧಿಪತಿ ಕುಬೇರನು ವರನ ಮಿತ್ರನಾಗಿದ್ದನಂತೆ, ಆದರೆ ಅದರಿಂದ ಪ್ರಯೋಜನವೇನೂ ಆಗಲಿಲ್ಲ. ವಿವಾಹದ ದಿನದಲ್ಲಿಯೂ ವರನ ಕೊರಳಲ್ಲಿ ಒಂದೆರಡು ರುದ್ರಾಕ್ಷಮಾಲೆಗಳು; ಮೈಗೆಲ್ಲಾ ಬೂದಿ; ಉಡುವದಕ್ಕೆ ಹುಲಿದೊಗಲು! ಅದೂ ಇರಲಿ. ಮದುಮಗಳಿಗಾದರೂ ನಾಲ್ಕು ಬಂಗಾರದ ನಗನಟ್ಟುಗಳನ್ನು ತರಬಾರದೇ? ಅವಳಿಗೂ ಇಂಥವೇ ವಸ್ತ್ರಾಲಂಕಾರಗಳು!

ಅರಸಿಗೆ ಬಲು ಪಶ್ಚಾತ್ತಾಪವುಂಟಾಯಿತು. ಅವಳು:—“ ಇದೇನು? ನಾರದರು ನಮ್ಮನ್ನು ಬಲು ವಂಚಿಸಿಬಿಟ್ಟರು? ಇವನೇ ಶಿವನು ಅಹುದೇನು? ನನ್ನ ಮಗಳು ಲಗ್ನದಲ್ಲಿಯೂ ನಾಲ್ಕು ನಗನಟ್ಟುಗಳನ್ನು ಕಾಣಲಿಲ್ಲವಲ್ಲ! ಏನು ಇದ್ದರೇನಾಯಿತು. ಅಳಿಯನ ಮನೆಯು ಜ್ಯೇಷ್ಠಾಲಕ್ಷ್ಮಿಯು··· ” ಎಂದು ಚಿಂತಿಸಿದಳು. ಕೂಡಿದ ಹೆಣ್ಣುಮಕ್ಕಳಲ್ಲಿ ಕೆಲವರು “ ಇದೇನೇ? ಅಳಿಯ! ಶುದ್ಧ ಬೈರಾಗಿ! ಜಡೆಯೇನು! ಬೂದಿಯೇನು? ರುದ್ರಾಕ್ಷಮಾಲೆಯೇನು? ಹುಲಿದೊಗಲೇನು? ಪಿಶ್!! ” ಎಂದು ಪರಿಹಾಸಗೈದರು. ಮತ್ತೆ ಕೆಲವು ಅದೃಷ್ಟವಾದಿನಿಯರಾದ ಮುದುಕಿಯರು, “ ಮೂಳ! ಇವನೆಂಥ ವರನೇ? ನಾರದರು ಅಷ್ಟು ಉದ್ದ ಇಷ್ಟು ಗಡುತರವೆಂದು ಹೇಳಿ ಇಂಥ ಬೈರಾಗಿಗೆ ನಮ್ಮ ಮುದ್ದು ಮಗು ಸತಿಯನ್ನು ಒಯ್ದು ಗಟ್ಟಿದರು. ಅಳಿಯನದು ಅರಸುಮನೆತನವಂತೆ! ಕೈಲಾಸಪತಿಯಂತಮ್ಮಾ! ಯಾತಕ್ಕೇನು ಕೊರತೆ ಇದ್ದೀತು! ಆದರೆ ಇನ್ನೊಂದು ಮಾತು. ಪ್ರತಿಯೊಬ್ಬರೂ ಪಡೆದದ್ದನ್ನೇ ಉಣ್ಣುವರಲ್ಲದೆ ದುಡಿದದ್ದನ್ನು ಉಣ್ಣಲಾರರು. ಅವಳ ಅದೃಷ್ಟದಲ್ಲಿಯೇ ಇಲ್ಲದ ಮಾತು ಎಲ್ಲಿಂದ ಬಂದೀತು. ಸತಿಯ ದೈವವೇ ಅಂಥದು. ” ಎಂದು ತಮ್ಮತಮ್ಮೊಳಗೆ ಗುಣುಗುಣು ಮಾತಾಡಿದರು. ಸತಿಯ ತಾಯಿಗೆ ಇದೆಲ್ಲಾ ತಿಳಿಯಿತು, ಸರಿ. ಆದರೆ ಮಾಡುವಳೇನು? ಅವಳ ಮನಸಿಗೆ ಅಳಿಯನ ಬಡತನದ್ದೊಂದು ಚಿಂತೆಯೇ ಹತ್ತಿತು. ಅವಳು ಮುಂದಾಗಿ ಬಂದು ಗೊತ್ತುಮಾಡಿದ ನಾರದರನ್ನು ಒಂದು ಮಾತು ಕೇಳೋಣವೆಂದು ಸುಮ್ಮನಾದಳು.

ಮಾರನೆಯ ದಿನ ಅರಸಿಯು ನಾರದರನ್ನು ಕರೆದು, “ ನಾರದರೇ, ವರನ ಐಶ್ವರ್ಯವನ್ನು ಬಾಯಿ ಹಿಡಿಯದಂತೆ ವರ್ಣಿಸಿದಿರಲ್ಲ! ಅದರಂತೆ ಎಲ್ಲಿ ಏನಿದೆ? ನಮ್ಮ ಸತಿಯು ಲಗ್ನದಲ್ಲಿಯೂ ನಾಲ್ಕು ವಸ್ತ್ರಗಳನ್ನು ಕಾಣಲಿಲ್ಲ! ” ಎಂದಳು.

**ನಾರದ:**—ದೇವೀ, ನಾನು ಹೇಳಿದ ಮಾತು ಸುಳ್ಳಲ್ಲ. ಸತಿಯು ನಿಜವಾಗಿಯೂ ರಾಜರಾಜೇಶ್ವರಿಯಾಗುವಳು. ಈಗ ನಾನು ಏನೂ ಹೇಳಲಾರೆನು. ಅವಳು ತನ್ನ ಮನೆಯಲ್ಲಿ ಹೋಗಿ ಇದ್ದ ಬಳಿಕ ಅಳಿಯನ ಸಂಪತ್ತನ್ನೂ ಮಗಳ ಸುಖಸಮಾಧಾನಗಳನ್ನೂ ನೀವೇ ಕಣ್ಣಾರೆ ಕಾಣುವಿರಿ.

ನಾರದರು ಈ ರೀತಿಯಾಗಿ ಅರಸಿಯನ್ನೂ ಬಳಗದವರನ್ನೂ ತುಸು (ಕೊಂಚ) ಸಮಾಧಾನಪಡಿಸಿದರು. ಆದರೆ ಮತ್ತೊಂದು ಮಹಾ ವಿಪತ್ತು ಸಂಭವಿಸಿತು.

ವರನ ವಿವಾಹದಕಾಲದ ವೇಷಭೂಷಣಗಳನ್ನೂ ನಿಬ್ಬಣದ ಜನರ ನಡೆನುಡಿಗಳನ್ನೂ ನೋಡಿ ದಕ್ಷಮಹಾರಾಜನಿಗೆ ಬಲು ನಾಚಿಕೆಯಾಯಿತು. ಅವನ ಉಳಿದ ಅಳಿಯಂದಿರಲ್ಲಿ ಒಬ್ಬನು ಆನೆಯಮೇಲೆ, ಇನ್ನೊಬ್ಬನು ಕುದುರೆಯ ಮೇಲೆ, ಮತ್ತೊಬ್ಬನು ರಥದಮೇಲೆ ಇಂತು ಮಹಾ ವೈಭವದಿಂದ ಮದುವೆಗೆ ಬಂದಿದ್ದರು. ಆದರೆ ಸತಿಯ ಪತಿಯಾಗುವ ಹೊಸ ಅಳಿಯನ ವಾಹನವು ದೊಡ್ಡದೊಂದು ಮುದಿಯೆತ್ತು! ಉಳಿದ ಅಳಿಯಂದಿರ ಸಂಗಡ ಬೆಳ್ಗೊಡೆ-ಬೆಳ್ಳಿಯ ಬೆತ್ತಗಳನ್ನು ಹಿಡಿಯುವ ಅನೇಕ ವಸ್ತ್ರಾಲಂಕಾರಭೂಷಿತರಾದ ಸೇವಕರಿದ್ದರು. ಆದರೆ ಇವನೊಡನೆ ತ್ರಿಶೂಲವನ್ನೋ ಡಮರನ್ನೋ ಹಿಡಿದ ವಿಕೃತ ಮುಖದ ಸೇವಕರು. ನಿಬ್ಬಣದ ಜನರ ಆ ವಿಕಟರೂಪಗಳನ್ನು ನೋಡಿ ದಕ್ಷರಾಜನಿಗೆ ಬಲು ಬೇಸರಬಂದಿತು; ತಿರಸ್ಕಾರವುಂಟಾಯಿತು; ಕೋಪವೂ ಬಂದಿತು. ಅವನ "ತಾನೇ ಶ್ರೇಷ್ಠ, ತನ್ನವರೇ ಶ್ರೇಷ್ಠರು." ಎಂಬ ಅಹಂಭಾವನೆಗೆ ಈ ಅಳಿಯನ ಸ್ಥಿತಿಗತಿಗಳನ್ನು ನೋಡುವದರಿಂದ ಬಲು ಆಘಾತವಾಯಿತು. ಇನ್ನು ಜೀವವಿರುವವರೆಗೂ ಈ ಅಳಿಯನನ್ನೂ ಅಳಿಯನ ಬಳಗದವರನ್ನೂ ತನ್ನ ಅರಮನೆಗೆ ಕರೆಯೆನೆಂದು ಅವನು ಪ್ರತಿಜ್ಞೆಮಾಡಿದನು. ಇನ್ನು ಸತಿಯ ವಿಚಾರ. ಒಮ್ಮೆ ಅವಳನ್ನು ತನ್ನ ಮನೆಯಲ್ಲಿಯೇ ಇಟ್ಟುಕೊಂಡುಬಿಡಬೇಕೆಂದು ಯೋಚಿಸಿದನು. ಆದರೆ ಮಗಳು ಈ ಮಾತನ್ನು ಎಂದೂ ಕೇಳಲಾರಳೆಂದು ತೋರಿದಬಳಿಕ, ಹೋಗಲಿ! ಕೊಟ್ಟ ಹೆಣ್ಣು ಕುಲದಿಂದ ಹೊರಗೆ. ಅವಳ ದೈವದಲ್ಲಿಯೇ ಹೀಗಿದ್ದಿತು. ನಾವಾದರೂ ಏನು ಮಾಡವೆವು. ನೋಡಿ ನೋಡಿ ಕಡೆಗೆ ಈ ಗತಿಯಾಯಿತು. ದುರ್ದೈವಿಗಳಿಗೆ ಕೊಟ್ಟು ಸುಖಪಡಿಸಿದವರಿಲ್ಲ. ಅದೃಷ್ಟವಂತರಿಗೆ ಕೊಡದೆ ಕಷ್ಟಕೊಟ್ಟವರಿಲ್ಲ. ನಾನೇನು ಮಾಡಲಿ! ಆ ಜೋಗಿಗೂ ಈ ಜೋಗಿಣಿಗೂ ಗಂಟು. ಅವರು ನಮ್ಮ ಮನೆಗೆ ಮಾತ್ರ ಬರದಿದ್ದರೆ ತೀರಿತು. ಎಂದು ಬಹು ಅನಾದರದೊಡನೆ ಯೋಚಿಸಿದನು.

ವರನ ವಿಷಯವಾಗಿ ಅತ್ತೆಯ ಮಾವನ, ಬಳಗದ, ಪುರಜನರ ಭಾವನೆಯು ಏನಾದರೇನು? ನಮ್ಮ ಮದುಮಗಳ ಭಾವವು ಯಾವ ಪ್ರಕಾರವಾಯಿತೆಂಬದನ್ನು ನೋಡುವ. ಇದುವರೆಗೆ ತನ್ನ ಅಕ್ಕ ಯೋಗಿನಿಯ ಮುಖದಿಂದ ಯಾವಾತನ ಗುಣವರ್ಣನೆಯನ್ನು ಕೇಳಿ ಪ್ರೀತಿಯಿಂದ ಯಾವಾತನು ತನ್ನ ಇಷ್ಟದೇವತೆಯೆಂದು ಹಗಲಿರುಳು ಭಕ್ತಿಯಿಂದ ಪೂಜಿಸುತ್ತಿದ್ದಳೋ ಯಾವಾತನ ಪ್ರಾಪ್ತಿಗಾಗಿ ವ್ರತೋಪವಾಸಗಳಿಂದ ಶರೀರವನ್ನು ಕೊರಗಿಸಿದ್ದಳೋ

ಆತನು ಪತಿಯಾಗಿ ಬಂದು ಎದುರಿಗೆ ನಿಂತಿರಲು ಸತಿಗೆ ಆದ ಮಹದಾನಂದವನ್ನು ಏನೆಂದು ಹೇಳೋಣ? ಅದಕ್ಕೆ ಆನಂದ ಪರಮಾನಂದ ಬ್ರಹ್ಮಾನಂದ ಇತ್ಯಾದಿ ಯಾವ ಶಬ್ದವೂ ಅನ್ವರ್ಥಕವಾದದ್ದಾಗಲಾರದು. ಸತಿಯು ಗೆಳತಿಯರೇ ಆ ಮನೋಭಾವನೆಯು ರಹಸ್ಯವನ್ನೂ ಯಥಾರ್ಥಜ್ಞಾನವನ್ನೂ ಪಡೆದುಕೊಳ್ಳಬೇಕು. ಸತಿಯು ಪತಿರಾಜನನ್ನು ಕಣ್ತುಂಬ ನೋಡಿ ತನ್ನನ್ನು ಕೈಲಾಸಪತಿಯು ಚರಣಾರವಿಂದಗಳಲ್ಲಿ ಭಕ್ತಿಯಿಂದ ಅರ್ಪಿಸಿದಳು. ಪತಿಯ ಪ್ರಸನ್ನಮುಖವೂ ರಜತಗಿರಿಯಂಥ ದೇಹವೂ ವಿಶಾಲ-ವಕ್ಷಸ್ಥಲವೂ ಕೂರ್ಮದಂತಿರುವ ಪಾದಗಳೂ ಸತಿಯು ಮನದಲ್ಲಿ ನೆಲೆಗೊಂಡವು. ಅವಳು ಮನದಲ್ಲಿ “ಹೇ! ಪ್ರಭುವೇ! ಸತಿಯ ಪ್ರಭುವೇ! ಸತಿಯ ಜನ್ಮವು ನಿಮಗಾಗಿಯೇ ಆಗಿರುವದು. ನಿಮ್ಮ ಸಹಧರ್ಮಿಣಿಯನ್ನು ಮಾಡಿದುದು ನನ್ನ ಪುಣ್ಯದ ಫಲವೇ ಸರಿ. ಇಂದು ನಾನು ಧನ್ಯಳಾದೆನು.” ಎಂದು ಆನಂದಬಟ್ಟಳು.

ಈ ರೀತಿ ಸತಿಗೆ ಆನಂದವಾಗಿದ್ದರೂ ಅವಳ ತಾಯ್ತಂದೆಗಳಿಗೆ ಮಾತ್ರ ಈ ವಿವಾಹವು ಹಿತಕರವಾಗಿ ತೋರಲಿಲ್ಲ. ದಕ್ಷರಾಜನ ಮುಖದಲ್ಲಿ ನಾಚಿಕೆ, ಅನಾದರ, ಅಪ್ರೀತಿ. ಕೊನೆಗೆ ಕಡು ವೈರ ಇವು ಒಡೆದು ಕಾಣಿಸಹತ್ತಿದವು. ಇದನ್ನು ನೋಡಿ ದಕ್ಷನ ತಂದೆಯಾದ ಬ್ರಹ್ಮನಿಗೆ ದುಃಖವಾಯಿತು. ಅವನು ಮಗನೊಡನೆ ಈ ಮಾತು ಒಡೆದು ಕೇಳಿದನು. ದಕ್ಷನು ಮನದಲ್ಲಿ ಹತ್ತಿಕ್ಕಿಕೊಂಡಿದ್ದ ರೋಷಭಾವನೆಗೆ ಈಗ ಮಾರ್ಗವು ದೊರೆಯಿತು. ಅವನು:—

“ನಾರದ! ಎಲ್ಲವನ್ನೂ ಮಾಡಿದವನು ನಾರದನು! ಅವನ ತಂಬೂರಿಯನ್ನು ಒಡೆದು ಚಲ್ಲುತ್ತೇನೆ! ಇಂಥ ತಿರುಕನೊಡನೆ ಸಂಬಂಧ ಬೆಳೆಯಿಸಿ ನಮ್ಮ ಮನೆತನದ ಗೌರವವನ್ನು ಕಳೆದುಬಿಟ್ಟನು. ನಮಗೆ ಅನುರೂಪವಾದ ನೆಂಟಸ್ತಿಕೆಯು ಕೂಡಿಬರದಿದ್ದರೆ ನಮ್ಮ ಸತಿಯು ನಮ್ಮಲ್ಲಿಯೇ ಉಳಿಯುತ್ತಿದ್ದಳು. ನೋಡಿದಿರಾ! ವರನ ವೇಷವೇನು? ಭೂಷಣಗಳೇನು? ಪರಿವಾರವೇನು? ಮಗಳಮೇಲಿನ ಮಮತೆಯನ್ನು ಇಂದೇ ಮರೆತುಬಿಟ್ಟೆನು. ಅವಳಾಯಿತು. ಆ ಜೋಗಿಯಾಯಿತು. ಹೋಗಲಿ!” ಎಂದನು.

**ಬ್ರಹ್ಮ:**—ತಮ್ಮಾ ಹಾಗಲ್ಲ. ಅವನು ಜೋಗಿಯಲ್ಲ. ದೇವಾದಿದೇವ ಮಹಾದೇವನು. ಜಗನ್ಮಾತೆಯಾದ ಸತಿಗೆ ಅನುರೂಪನಾದ ವರನು. ನಾರದನು ನಿನ್ನ ಕುಲಗೌರವಕ್ಕೆ ಕಲಂಕವನ್ನು ತರಲಿಲ್ಲ. ಅಳಿಯನೊಡನೆ ಪ್ರೀತಿಯಿಂದಿರು.

**ದಕ್ಷ**—ಇರಲಿ. ಈತರದ ಉಪದೇಶವು ಸಾಕು. ನಾನು ನನ್ನ ಮನಸ್ಸಿಗೆ ಬಂದಹಾಗೆ ನಡೆದುಕೊಳ್ಳುವೆನು. ಹೆಚ್ಚಿನ ಮಾತಿನಿಂದ ಫಲವೇನು?

ಅಭಿಮಾನಾಂಧನಾದ ದಕ್ಷನಿಗೆ ಯಾರ ಉಪದೇಶದಿಂದಲೂ ಸಮಾಧಾನವಾಗಲಿಲ್ಲ. ಅವನು ಪತಿಗೃಹಕ್ಕೆ ತೆರಳುವ ಸತಿಗೆ ಆಶೀರ್ವಾದವನ್ನು ಕೂಡ ಮಾಡಲಿಲ್ಲ. ಅವಳು ಭಕ್ತಿಯಿಂದ ಬಂದು ನಮಸ್ಕಾರಮಾಡಲು ತಿರಸ್ಕಾರದೃಷ್ಟಿಯಿಂದ ನೋಡಿದನು; ಇಷ್ಟೇ. ಆದರೆ ಸತಿಯ ತಾಯಿಯ ಮಾತು ಬೇರೆಯಾಗಿತ್ತು. ಮಾತೆಯ ಮಮತೆಯೇ ಬೇರೆ; ತಂದೆಯ ಮೋಹವೇ ಬೇರೆ. ಸತಿಯು ತಾಯಿಯ ಬಳಿಗೆ ಬಂದು ನಮಸ್ಕಾರಮಾಡಲು ಅವಳಿಗೆ ಬಹು ದುಃಖವಾಯಿತು. ಪತಿಗೃಹದಲ್ಲಿ ಮಗಳು ಸಹಿಸಬೇಕಾಗಿರುವ ಕಷ್ಟದ ವಿಚಾರದಿಂದ ಅವಳ ಎದೆಯೊಡೆದು ನೀರಾಯಿತು. ಆದರೆ ನಾರದರು ಸುಳ್ಳು ಹೇಳಲಾರರೆಂದು ಅವಳು ನಂಬಿದ್ದಳು. ಆದರಿಂದ ಅವಳು ಮಗಳನ್ನು ಎತ್ತಿ ಮುದ್ದಿಟ್ಟುಕೊಂಡು ಹೇಳಬೇಕಾಗಿರುವ ನಾಲ್ಕು ಉಪದೇಶದ ಮಾತುಗಳನ್ನು ಹೇಳಿ, ಕೊನೆಗೆ “ತಂಗೀ, ನೀನೇನೂ ಅರಿಯದವಳಲ್ಲ. ನಿನಗೂ ನಿನ್ನ ಪತಿಗೂ ಹೇಗೆ ಸುಖಸಮಾಧಾನಗಳಾಗುವವೋ ಹಾಗೆ ನಡೆದುಕೋ. ಸುಖದಿಂದ ಬಹುಕಾಲ ಬಾಳಿ ಅಖಿಲ ಆನಂದವನ್ನು ಅನುಭವಿಸು.” ಎಂದು ಆಶೀರ್ವಾದಮಾಡಿ ಬೀಳ್ಕೊಟ್ಟು ಕಳುಹಿದಳು.



## ಆರನೆಯ ಪರಿಚ್ಛೇದ.

## ಕೈಲಾಸವಾಸ.



ವಿವಾಹಾನಂತರದಲ್ಲಿ ಸತಿಯು ಪತಿದೇವನೊಂದಿಗೆ ಕೈಲಾಸಗಿರಿಗೆ ಗಮನಮಾಡಿದಳು. ಕೈಲಾಸವು ಬಹು ಮನೋಹರವಾದ ಪ್ರದೇಶವು. ಅಲ್ಲಿ ಋತುಭೇದವಿಲ್ಲ. ಸದಾ ವಸಂತಋತುವೇ ಸರಿ! ಎತ್ತ ನೋಡಿದತ್ತ ಮನೋಮುಗ್ಧಕರವಾದ ಸೃಷ್ಟಿಯ ಪ್ರಾಕೃತಿಕ ಸೌಂದರ್ಯವು ವಿರಾಜಿಸುತ್ತಿರುವದು. ಸದಾ ಆನಂದ; ಆನಂದದಿಂದ ಸೃಷ್ಟಿಯೇ

ನಗುವಂತೆ ತೋರುವದು. ಮನಸ್ಸಿನ ಚಂಚಲತೆಗೆ ಅಲ್ಲಿ ಕಾರಣವೇ ಇರಲಿಲ್ಲ. ಸಕಲ ಪ್ರಾಣಿಗಳೂ, ಪಶುಪಕ್ಷಿ ಕ್ರಿಮಿಕೀಟಕಗಳೂ, ಗಿಡುಗಂಟಿ ತರುಲತೆಗಳೂ ಸಕಲ ಸಮೃದ್ಧಿಯೊಂದಿಗೆ ಸುಖದಿಂದ ವಾಸಿಸುವವು.

ಸತಿಯು ಆಗಮನದಿಂದಂತೂ ಕೈಲಾಸವು ಸರ್ವಮಂಗಳಾಶ್ರಮವಾಯಿತು. ಸತಿಗೆ ಅಲ್ಲಿ ಅತ್ತೆ ಅತ್ತಿಗೆಯರಿಲ್ಲ; ಮಾವನಿಲ್ಲ; ಭಾವಮೈದುನರಿಲ್ಲ. ಅವಳೇ ಸರ್ವಾಧಿಕಾರಿಣಿ. ಪತಿರಾಜನಿಗೆ ಸಂಸಾರದಲ್ಲಿ ಅಷ್ಟೊಂದು ಆದರವಿಲ್ಲ; ಆದರೆ ಸತಿಯ ಈಗಿನ ರೀತಿಯೇ ಬೇರೆ. ಅವಳಿಗೆ ಹಗಲಿರುಳು ಒಂದೇ ಕೆಲಸ; ಪತಿ ದೇವನ ಮನಸ್ಸನ್ನು ಪ್ರಪಂಚದ ಕಡೆಗೆ ಆಕರ್ಷಿಸಿಕೊಳ್ಳುವದೊಂದೇ ಅವಳ ಧ್ಯೇಯವಾಗಿತ್ತು. ಅವಳು ಹಗಲಿರುಳು ತ್ರಿಕರಣಪೂರ್ವಕವಾಗಿ ಪತಿಸೇವೆ ಯಲ್ಲಿ ಆಸಕ್ತಳಾಗಿರುವಳು. ಹೊತ್ತು ಒದಗಿದಾಗ ಗೃಹಸ್ಥಾಶ್ರಮದ ಮಹತ್ವದ ಪ್ರತಿಪಾದನೆಯ ಒಂದೆರಡು ಬೀಜಮಾತುಗಳನ್ನು ಪತಿಯ ಹೃದಯಕ್ಷೇತ್ರದಲ್ಲಿ ಊರಿಬಿಡುವಳು.

ಸತಿಗೆ ವಸ್ತ್ರಾಲಂಕಾರಗಳ ಮೇಲೆ ಮೊದಲಿನಿಂದಲೂ ಪ್ರೀತಿಯಿರಲಿಲ್ಲ. ಈಗಲಂತೂ ಸ್ಮಶಾನವಾಸಿಯ ಗೃಹಿಣಿಯಾಗಿರುವಳು. ಪತಿಯು ಉಡುವದು ಹುಲಿದೊಗಲು. ಸತಿಗೂ ಅದೇ ಉಡುಗೆ; ನಾರಬಟ್ಟೆಯಾದರೂ ಆಗುವದು. ಸಣ್ಣ ದೊಡ್ಡ ರುದ್ರಾಕ್ಷೆಯ ಸರಗಳೇ ಅವಳ ಪತಿಗೂ ಅವಳಿಗೂ ಅಲಂಕಾರ ಗಳು. ಮನೆಯಲ್ಲಿ ಆಳುಹೋಳುಗಳಿಗೇನೂ ಕೊರತೆಯಿರಲಿಲ್ಲ. ನಂದಿ, ಭೃಂಗಿ ಇವರಿಬ್ಬರು ಕೈಲಾಸಗಿರಿಯ ರಕ್ಷಕರು; ಸತಿಗೂ ಅವಳ ಪತಿಗೂ ಪರಮಾಪ್ತ ರಾದ ಸೇವಕರು. ಅವರು ಸತಿಯನ್ನು ತಾಯಿಯೆಂದು ಕರೆಯುವರು. ಸತಿಯಾ ದರೂ ಅವರನ್ನು ಹಡೆದ ಮಕ್ಕಳಂತೆಯೇ ನೋಡಿಕೊಳ್ಳುವಳು.

ಕೈಲಾಸಪತಿ ಶಂಕರನು ಸದಾ ಸಮಾಧಿಸ್ಥನಾಗಿಯೇ ಇರುವನು. ಅವಸರ ವಿದ್ದಾಗ ಸತಿಯು ಅವನ ಮುಂದೆ ಕೈ ಜೋಡಿಸಿಕೊಂಡು ಕುಳಿತಿರುವಳು. **ಒಂದೊಂದು ದಿನ ಇಬ್ಬರೂ ಕೈಲಾಸಗಿರಿಯ ಬೇರೆ ಬೇರೆ ಭಾಗಗ ಳಲ್ಲಿ ಸೃಷ್ಟಿಯ ಅನುಪಮಸೌಂದರ್ಯದ ನಿರೀಕ್ಷಣೆಯಲ್ಲಿ ನಿಮಗ್ನ ರಾಗುವರು.** ಒಮ್ಮೊಮ್ಮೆ ದೊಡ್ಡದೊಂದು ಹಾಸುಗಲ್ಲ ಮೇಲೆ ಕುಳಿತು, ಯೋ ಗಶಾಸ್ತ್ರ, ಆಗಮ-ನಿಗಮಗಳ ವಿಚಾರ, ಧರ್ಮಾಧರ್ಮಮಾರ್ಗಗಳ ವಿಚಾರ, ಪ್ರಪಂಚದ ಪ್ರಜೆಗಳ ಸುಖದುಃಖದ ವಿಚಾರ, ಮುಂತಾದ ಸಂಗತಿಗಳನ್ನು

ಕುರಿತು ಮಾತಾಡುತ್ತಿರುವರು. ಸತಿಯು ತನ್ನ ಪರಮಗುರು ಶಂಕರನೊಡನೆ ಒಂದು ದಿನ ಕೈಲಾಸಗಿರಿಯ ಒಂದು ಭಾಗದಲ್ಲಿ ಹೋಗಿ ಕುಳಿತುಕೊಂಡಾಗ, ಅವರವರ ನಡುವೆ ಈ ರೀತಿ ಸಂಭಾಷಣೆಯು ನಡೆಯಿತು:—

**ಸತಿ:**—ಜಗತ್ಪಿತನೇ, ನನಗೆ ಈ ಮನೋಹರವಾದ ಸೃಷ್ಟಿಸೌಂದರ್ಯದ ನಿರೀಕ್ಷಣೆಯಿಂದ ಪರಮಾನಂದವಾಯಿತು. ನಾನು ಕೈಲಾಸಗಿರಿಗೆ ಕಾಲಿಕ್ಕಿದಂದಿನಿಂದಲೂ ಒಂದಾದರೂ ದಿನ ನನ್ನ ಮನಸಿಗೆ ದುಃಖದ ಕಲ್ಪನೆಯು ಕೂಡ ಸೋಂಕಲಿಲ್ಲ. ಅದರಿಂದಲೇ ಪ್ರಪಂಚವು ಮಹಾದುಃಖಕ್ಕೆ ಕಾರಣವಾಗಿರುವದೆಂದು ಜಗತ್ತಿನ ಜನರು ಹೇಳುತ್ತಿರುವ ಮಾತಿನಲ್ಲಿ ನನಗೆ ಈಗ ತುಂಬಾ ಸಂಶಯವುಂಟಾಗಿರುವದು. ಅವರ ಈ ತರದ ದುಃಖಕ್ಕೆ ಕಾರಣವೇನು? ಹೇಳಬಲ್ಲಿರಾ? ಹಿಂದೊಂದು ದಿನ ನನ್ನ ಅಕ್ಕ ಯೋಗಿನಿಯು ಈ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳಿದ್ದಳು.

**ಶಂಕರ:**—ಸತೀ, ನೀನಿಂದು ಒಂದು ಮಹತ್ವದ ಪ್ರಶ್ನೆಯನ್ನು ಕೇಳಿದೆ. ಇದರಿಂದ ನನಗೆ ತುಂಬಾ ಸಮಾಧಾನವಾಯಿತು. ಅಡ್ಡಿಯಿಲ್ಲ. ನಿನ್ನ ಪ್ರಶ್ನೆಗೆ ತಕ್ಕ ಉತ್ತರವನ್ನಾದರೂ ಹೇಳುವೆನು. ಮೊದಲು ನನ್ನದೊಂದು ಪ್ರಶ್ನೆ. ನೀನೀಗ ಈ ಸೃಷ್ಟಿಸೌಂದರ್ಯವನ್ನು ನೋಡಿ ಒಳ್ಳೇ ಆನಂದವಾಯಿತೆಂದೆಯಲ್ಲವೇ? ಹೇಳು. ಆನಂದವು ಎಲ್ಲಿರುವದು? ಈ ತಿಳಿಗೊಳದ ಸ್ಫಟಿಕ ಸ್ವಚ್ಛವಾದ ಜಲದಲ್ಲಿರುವದೇ? ಈ ಪೂತು ಕಾತು ಮನೋಹರವಾಗಿರುವ ಜಂಬೀರ ವೃಕ್ಷದಲ್ಲಿರುವದೇ? ಅಗೋ ದೂರದಲ್ಲಿ ಮನೋಹರವಾಗಿ ತೋರುತ್ತಿರುವ ಅರಣ್ಯದಲ್ಲಿರುವದೇ? ಆಕಾಶದಲ್ಲಿ ಸಂಚರಿಸಿ ಸಕಲ ಜಗತ್ತಿಗೂ ನೇತ್ರಸ್ವರೂಪನಾಗಿರುವ ಸೂರ್ಯನಲ್ಲಿರುವದೇ? ಎಲ್ಲಿರುವದು?

ಪತಿದೇವನ ಮಾತಿಗೆ ಒಮ್ಮಿಂದೊಮ್ಮೆ ಸಮರ್ಪಕವಾದ ಉತ್ತರವನ್ನು ಕೊಡಲು ಸತಿಗೆ ಸಾಧ್ಯವಾಗಲಿಲ್ಲ. ಆದರೂ ಅವಳು ಬಲು ಅಭಿಮಾನಿ. ಒಮ್ಮೆ ತನ್ನ ಮಾತು ಕೆಳಗಾಗುವದೆಂದರೆ ಅದು ಅವಳಿಗೆ ತೀರ ಅಸಹ್ಯವಾದ ಮಾತು. ಅದರಿಂದ ಅವಳು “ ಜಗತ್ಪಿತನೇ, ನೀವೆನ್ನುವದಾದರೂ ಏನು? ಜಗತ್ತಿನಲ್ಲಿ ಸುಖವೇ ಇಲ್ಲವೆನ್ನುವಿರಾ. ಆನಂದವು ಜಗತ್ತಿನಲ್ಲಿ ಇಲ್ಲದಿದ್ದರೆ ಅದರ ಪ್ರಾಪ್ತಿಗಾಗಿ ಈ ಸಕಲ ಪ್ರಪಂಚವು ಹಗಲಿರುಳು ಹೆಣಗುತ್ತಿರಲು ಕಾರಣವೇನು? **ಸುಖಂ ಮೇಭೂಯಾತ್, ಸುಖಂ ಮೇಭೂಯಾತ್.** ( ನನಗೆ

ಸುಖವಾಗಲಿ, ನನಗೆ ಸುಖವಾಗಲಿ) ಎಂದು ಮೂರು ವರುಷದ ಮಗುವಿನಿಂದ ನೂರೊಂದು ವರುಷದ ವೃದ್ಧನವರೆಗಿನ ಸರ್ವರೂ ಕನಸಿನಲ್ಲಿಯೂ ಕನವರಿಸುತ್ತಿರುವದು ಕೇವಲ ನಿರರ್ಥಕವಾದದ್ದೇನು?" ಎಂದು ಪ್ರತಿಯಾಗಿ ಪ್ರಶ್ನೆ ಮಾಡಿದಳು.

ಸತಿಯು ಯುಕ್ತಿವಾದವನ್ನು ಹೂಡಿದ್ದನ್ನು ನೋಡಿ ಕೈಲಾಸಪತಿಗೆ ನಗೆ ಬಂದಿತು. ಅವನು:—" ಹೆಂಗಸರ ಸ್ವಭಾವವೇ ಇದು; ಮಾತಿಗೆ ಮಾತು ಕೊಡಲಾರದೆ ಹೋದರೆ ಹಾಗೆಂದು ಒಪ್ಪಿಕೊಳ್ಳುವದು ಮಾತ್ರ ಅವರಿಂದ ಎಂದೂ ಆಗದು. ಸತೀ, ಇರಲಿ, ನಾನೇ ಹೇಳುತ್ತೇನೆ. ಸುಖದುಃಖಗಳೆಂಬವು ಕೇವಲ ಕಲ್ಪಿತ ಸಾಮಗ್ರಿಗಳು. ಅವು ಬಾಹ್ಯಸೃಷ್ಟಿಯೊಳಗಿನ ಯಾವ ವಸ್ತುವಿನಲ್ಲಿಯೂ ಇರುವದಿಲ್ಲ; ಹಾಗು ಹೊರಗಿನಿಂದ ಬರತಕ್ಕಂಥವೂ ಅಲ್ಲ. ಸುಖವೆಂಬದು ನಗನಟ್ಟುಗಳು, ಆಳುಹೋಳುಗಳು. ಧನಧಾನ್ಯಗಳು, ದನಕರುಗಳು, ಹೆಂಡರುಮಕ್ಕಳು ಇವುಗಳಲ್ಲಿ ಯಾವದರಿಂದಲೂ ಹುಟ್ಟಲರಿಯದು. ಹಾಗು ಇವುಗಳ ಅಭಾವದಿಂದಲೇ ಆಗಲಿ ವಿಯೋಗದಿಂದಲೇ ಆಗಲಿ ದುಃಖವು ಒದಗದು. ಈ ತರದ ಬಾಹ್ಯವಸ್ತುಗಳು ನಮ್ಮ ಸುಖದುಃಖಗಳಿಗೆ ಕಾರಣವಾಗುವದೆಂಬ ಮಾತು ಕೇವಲ ನಿರರ್ಥಕವಾದದ್ದೇ ಸರಿ. ಯಾರು ಯಾರಿಗೂ ಸುಖವನ್ನೇ ಆಗಲಿ, ದುಃಖವನ್ನೇ ಆಗಲಿ ಕೊಡುತ್ತಿರುವದಿಲ್ಲ. ಎರಡನೆಯವರು ನನಗೆ ಸುಖದುಃಖಗಳನ್ನು ಕೊಡುತ್ತಾರೆಂಬ ಮಾತು ದುರ್ಬುದ್ಧಿಮೂಲಕವಾದದ್ದು.× ಸುಖವೆಂದರೆ ಪೂರ್ಣ ಸಮಾಧಾನವು; ಅರ್ಥಾತ್ ಆಶಾಪಾಶರಹಿತವಾದ ಅಂತಃಕರಣದ ಶಾಂತಿಮಯವಾದ ಸ್ಥಿತಿಯೇ ಸುಖವು. ಆ ತರದ ಶಾಂತಿರಹಿತವಾದ, ಆಶಾಪಾಶಯುಕ್ತವಾದ ಸ್ಥಿತಿಯೇ ದುಃಖವು. ಸುಖದುಃಖಗಳು ಮನಸಿನ ಹೊರಗೆ ಇರುವದಿಲ್ಲ.

**ಸತಿ:**— ಪ್ರಭುವೇ, ನೀವೆಂದ ಮಾತು ನನಗೆ ಸಮ್ಮತವಾಗಿದೆ. ಆದರೆ ಅಖಿಲ ಮಾನವರಿಗೆ ಈ ಮಾತು ಸರಿದೋರದೆಂಬಂತೆ ತೋರುವದು. ಪ್ರಪಂಚದೊಳಗಿನ ಯಾವ ವಸ್ತುವೂ ತಮಗೆ ಸುಖವನ್ನು ಕೊಡಲಾರದು, ಎಂದರೆ ಅವರಿಗೆ ಈ ಮಾತು ತೀರ ಹಾಸ್ಯಾಸ್ಪದವೆನಿಸುವದರಲ್ಲಿ ಸಂಶಯವಿಲ್ಲ. ಹಾಗು

×सुखस्य दुःखस्य न कोपि दाता, परोददातीतिकुबुद्धिरोषा ॥

ಪ್ರತಿಯೊಬ್ಬರೂ ಈ ರೀತಿ ನಿವೃತ್ತಿಮಾರ್ಗವನ್ನು ಅವಲಂಬಿಸಿಬಿಟ್ಟರೆ ಜಗತ್ತು ನಡೆಯಬೇಕಾದರೂ ಹ್ಯಾಗೆ? ಮನುಷ್ಯಪ್ರಾಣಿಯು ಕೈಕೊಳ್ಳುವ ಪ್ರತಿಯೊಂದು ಕಾರ್ಯಕ್ಕೂ ಅವನ ಅಂತರಂಗದಲ್ಲಿ ಉದ್ಭವಿಸುವ ಆಶೆಯೇ ಕಾರಣವು. ಆ ಆಶೆಯೇ ಉಳಿಯದಿದ್ದರೆ ಅವನು ಕಾರ್ಯಪ್ರವೃತ್ತನಾಗುವದಾದರೂ ಹ್ಯಾಗೆ? ಕೆಲವರು ಸುಖಾಭಿಲಾಷೆಯಿಂದ ಕಾರ್ಯಪ್ರವೃತ್ತರಾಗುವರು. ಕೆಲವರು ದುಃಖನಿವಾರಣೆಗಾಗಿ ಕೆಲಸವನ್ನು ಅಂಗೀಕರಿಸುವರು. ಈ ತರದ ಸುಖದುಃಖಗಳು ಬಾಹ್ಯ ಕಾರಣಗಳಿಂದ ಉದ್ಭವಿಸಲಾರವೆಂದು ನೀವೇ ಉಪದೇಶಿಸಿಬಿಟ್ಟರೆ ಈ ಕರ್ಮಭೂಮಿಯು ನಾಳೆಯೇ ಆಲಸ್ಯದ ತವರಮನೆಯಾಗಬಹುದು. ಪ್ರಪಂಚದಲ್ಲಿ ಯಾವ ಕಾರ್ಯಕ್ಕೂ ಕಾರಣವೇ ಉಳಿಯದು. ನೀವು ಉಪದೇಶಿಸುವ ಈ ತರದ ವೇದಾಂತವಿಚಾರವು ನಿಮ್ಮ ಪ್ರಜೆಗಳ ಅಂತರಂಗದಲ್ಲಿ ಆಲಸ್ಯದ ಬೀಜದಂತೆ ಪರಿಣಮಿಸುವದರಲ್ಲಿ ಸಂದೇಹವಿಲ್ಲ.

**ಶಂಕರ:**—ಪ್ರಿಯೇ, ನೀನೆಂದ ಮಾತು ಕೇಳುವವರಿಗೆ ಒಮ್ಮೆ ಸಮವೆಂದು ತೋರಿದರೂ ಅದನ್ನು ಹೆಚ್ಚು ಸೂಕ್ಷ್ಮವಾಗಿ ವಿಚಾರಮಾಡಿದರೆ ಅದಕ್ಕೆ ತಕ್ಕ ಸಮಾಧಾನವು ಕೂಡ ಕೂಡಲೆ ಹುಟ್ಟುವದು. ವೇದಾಂತವಿಚಾರವು ಪ್ರಜೆಗಳ ಆಲಸ್ಯದ ಉತ್ಪತ್ತಿಗೆ ಕಾರಣವಾಗುವದೆಂಬ ಮಾತು ನಿರಾಧಾರವಾದದ್ದು. ಇದಕ್ಕೆ ನಾನೇ ಉದಾಹರಣೆಯು. ನಾನು ವೇದಾಂತವಿಚಾರವನ್ನು ಪ್ರತಿಪಾದಿಸುವೆನೆಂದು ನೀನು ನನ್ನನ್ನು ಸೋಮಾರಿಯೆನ್ನುವಿಯೇನು? ವೇದಾಂತ ವಿಚಾರವನ್ನು ಕೈಕೊಳ್ಳುವದೆಂದರೆ ಅತ್ತಿತ್ತ ನಾಲ್ಕು ದಾಸರ ಪದಗಳನ್ನು ಹಾಡುತ್ತ ಕಾರ್ಯಸಾಧುವಿನ ವೇಷದಿಂದ ಅಲೆಯುತ್ತಿರುವದಲ್ಲ. ವೇದಾಂತ ವಿಚಾರದಲ್ಲಿ ಇರತಕ್ಕ ರಹಸ್ಯವು ಒಂದೇ. "ನಾನು ಯಾರು, ನನ್ನ ಕರ್ತವ್ಯದ ವ್ಯಾಪ್ತಿಯೆಷ್ಟು" ಇದೇ ವೇದಾಂತದ ಸಾರದ ಸಾರವು. ನಾನು ಯಾರೆಂಬ ಪ್ರಶ್ನೆಯನ್ನು ಬಿಡಿಸಹೋಗುವದರಿಂದ ಮನುಷ್ಯನ ಮನಸ್ಸಿನೊಳಗಿನ ಅಹಂಕಾರವು ಅಳಿದುಹೋಗಿ ಅಲ್ಲಿ ವಿಶ್ವಪ್ರೇಮದ (ವಿಶ್ವಬಂಧುತ್ವದ) ಭಾವನೆಯು ಉದಯವಾಗುವದು. ಈ ತರದ ವಿಶ್ವಪ್ರೇಮದ ಭಾವನೆಯು ಹುಟ್ಟಿತೆಂದರೆ ಮನುಷ್ಯನ ಮನಸಿಗೆ ಸಂಸ್ಕಾರವಾಗಿ ಅವನಿಗೆ ತನ್ನ ಕರ್ತವ್ಯದ ವ್ಯಾಪ್ತಿಯ ಜ್ಞಾನವಾಗುವದು. ಅಂದರೆ ತಾನು, ತನ್ನ ಹೆಂಡತಿ, ತನ್ನ ಮಕ್ಕಳು, ತನ್ನ ಆಪ್ತರು ಇಷ್ಟರು ಇವರ ಕಲ್ಯಾಣಚಿಂತನೆಯೇ ತನ್ನ ಕರ್ತವ್ಯವೆಂಬ ಅವನ

ಮನಸಿನೊಳಗಿನ ಸಂಕುಚಿತ ಭಾವನೆಯು ಅಳಿದು, ಅಲ್ಲಿ ತನ್ನ ಸಮಾಜ, ತನ್ನ ದೇಶ, ತನ್ನ ರಾಷ್ಟ್ರ, ಜನ್ಮದಾತನಾದ ಭಗವಂತನ ಮಕ್ಕಳಾದ ಪ್ರಪಂಚದ ಪ್ರಜೆಗಳು ತನ್ನ ಬಂಧುಗಳು, ಎಂಬ ಉಚ್ಚ ಉಚ್ಚತರ ಉಚ್ಚತಮವಾದ ಭಾವನೆಗಳು ಉದಯವಾಗಿ ಪ್ರಪಂಚದ ಹಿತದ ಕಡೆಗೆ ಅವನ ದೃಷ್ಟಿಯು ಹೊರಳುವದು. ಈ ತರದ ಪ್ರಪಂಚದ ಹಿತದಲ್ಲಿ ಆಸಕ್ತಿಯುಳ್ಳ ಮನುಷ್ಯನು ಆಲಸ್ಯಗಾರನಾಗುವ ಬಗೆ ಹೇಗೆ? ಮನುಷ್ಯನ ಮನಸಿನಲ್ಲಿ ಹೇಗೆ ಹೇಗೆ ವಿಶ್ವಬಂಧುತ್ವದ ಭಾವನೆಯು ದೃಢಾತ್ ದೃಢತರವಾಗುತ್ತ ಹೋಗುವದೋ ಹಾಗೆ ಹಾಗೆ ಅವನ ತಲೆಯಮೇಲಿನ ಕರ್ತವ್ಯದ ಭಾರವು ಹೆಚ್ಚು ಹೆಚ್ಚಾಗುತ್ತ ಹೋಗುವದು. ಅವನ ಮೈಯೊಳಗಿನ ರಕ್ತಕ್ಕೆ ಬಿಸಿಯೇರುವದು. ನಿರಹಂಕಾರಿಯಾದ ವಿಶ್ವಪ್ರೇಮಿಯಾದ ಮನುಷ್ಯನಿಗೆ ಪ್ರಪಂಚವೇ ಸಹಾಯ ಮಾಡುವದು. ಅವನಿಂದ ಪ್ರಪಂಚದ ನಿಜವಾದ ಹಿತವು ಸಾಧಿಸುವದು. ಅವನೇ ಧನ್ಯನು! ಮನುಷ್ಯಜನ್ಮವನ್ನು ಪಡೆದುಕೊಂಡದ್ದರ ಸದುಪಯೋಗವನ್ನು ಮಾಡಿಕೊಡುವನೆಂದರೆ ಅವನೊಬ್ಬನೇ! ಅವನೊಬ್ಬನೇ ಸೃಷ್ಟಿಯಲ್ಲಿ ಮಾನವರೂಪದಿಂದ ಅವತರಿಸಿದ ಈಶ್ವರನು. ಯಾವ ದೇಶದಲ್ಲಿ ಇಂಥ ಅಹಂಕಾರ ಮಮಕಾರಗಳನ್ನು ತೊರೆದು ಕೇವಲ ವಿಶ್ವಪ್ರೇಮದ ಭಾವನೆಯಿಂದಲೇ ಕಾರ್ಯಗಳನ್ನು ಮಾಡತಕ್ಕ ಜನರು ಇರುವರೋ ಆ ದೇಶದ ಕಲ್ಯಾಣವಾಗುವದರಲ್ಲಿ ಸಂದೇಹವಿಲ್ಲ. ವಿಶ್ವಬಂಧುತ್ವದ ಭಾವನೆಯು ಹುಟ್ಟಿತೆಂದರೆ ಸ್ವಂತ ಸುಖದುಃಖಗಳ ಕಲ್ಪನೆಯು ತಾನಾಗಿಯೇ ಅಳಿದು ಹೋಗುವದು. ಉಳಿಯುವದು ಕೇವಲ ಶಾಂತಿ! ಶಾಂತಿಮಯವಾದ ಅಂತರಂಗ!

ಹೇ! ತಾಯೇ! ಭಗವತೀ! ಭಾರತಭೂಮಾತೇ! ಕರ್ನಾಟಕ ಜನನೀ! ನಿನ್ನ ಉದರದಲ್ಲಿ ಇಂಥ ಸ್ವಾರ್ಥತ್ಯಾಗಿಗಳಾದ ಮಹಾಪುರುಷರು ಎಷ್ಟು ಜನರಿರುವರು! ಪ್ರಿಯ ಕರ್ನಾಟಕ ಬಾಂಧವರೇ, ನಮ್ಮಲ್ಲಿ ಎಷ್ಟು ಜನರಿರುವರು? ಎಷ್ಟು ಜನರು ಆಗುವರು? ಎಂದು ಆಗುವರು?

**ಸತಿ:**—ಜಗತ್ಪಿತನೇ, ನೀನೆಂದಮಾತು ಸತ್ಯವೇ ಸರಿ. ಆದರೆ ಇದರಲ್ಲಿ ಇನ್ನೊಂದು ಅಡಚಣಿಯಿರುವದು. ಸಕಲರೂ ಸರ್ವ ಸ್ವಾರ್ಥವನ್ನೂ ತ್ಯಜಿಸಿ ವಿಶ್ವಪ್ರೇಮದ ಬಳಿಕೆಯಿಂದ ನಡೆಯುವದು ಸಾಧ್ಯವಾದ ಮಾತೆಂದು ಒಮ್ಮಿಂದೊಮ್ಮೆ ಒಪ್ಪಿಕೊಳ್ಳಲಾರೆನು. ಆದರಿಂದ ಭೂಲೋಕದ ಪ್ರಜೆಗಳು

ತಮ್ಮ ಜನ್ಮಸಾರ್ಥಕತೆಯು ಸಲುವಾಗಿ ನಡೆದುಕೊಳ್ಳಬೇಕಾಗಿರುವ ಒಂದು ಸುಲಭವಾದ ಮಾರ್ಗವನ್ನು ತೋರಿಸಿಕೊಟ್ಟರೆ ನೆಟ್ಟಗಾಗುವದು. ನನ್ನ ನಿಮ್ಮಂಥವರ ಮಾತು ಬೇರೆ, ಸಾಮಾನ್ಯಜನರ ಮಾತು ಬೇರೆ. ಪ್ರತಿಯೊಂದು ವ್ಯಕ್ತಿಗೂ ಪೂರ್ವದ ಸಂಸ್ಕಾರವೆಂಬದೊಂದು ಇದ್ದೇ ಇರುವದಲ್ಲವೇ? ಆ ಸಂಸ್ಕಾರಬಲದಿಂದ ಮನುಷ್ಯಪ್ರಾಣಿಯು ಒಮ್ಮಿಂದೊಮ್ಮೆ ಮೋಹಜಾಲದೊಳಗಿಂದ ಮುಕ್ತನಾಗಿ ವಿಶ್ವಪ್ರೇಮದ ಮಾತನ್ನು ಅರಿತುಕೊಂಡು ಅದನ್ನು ಆಚರಿಸಲು ಶಕ್ತನಾಗಲಾರನು. ಆದ್ದರಿಂದ ಅಂಥವರು ನೆನಪಿನಲ್ಲಿಡತಕ್ಕ ಒಂದೆರಡು ಮಾತುಗಳನ್ನು ತಾವು ಹೇಳಿದರೆ ನನಗೆ ಸಮಾಧಾನವಾಗುವದು.

**ಶಂಕರ:**—ಸತೀ, ಒಳ್ಳೇದು. ಹಾಗೆಯೇ ಮಾಡುವೆನು. "ಅಹಾ! ಸತೀ! ಅಲ್ಲಿ ನೋಡಿದೆಯಾ? ಎಷ್ಟು ಚಮತ್ಕಾರವು ನಡೆದಿರುವದು?" ಎಂದು ಶಂಕರನು ತುಸು ದೂರದಲ್ಲಿರುವ ಅರಣ್ಯದ ಕಡೆಗೆ ಬೆರಳುಮಾಡಿ ತೋರಿಸಿದನು.

ಸತಿಯು ಪತಿದೇವನ ತರ್ಜನೀಬೆರಳಿನ ನಿಟ್ಟನ್ನು ನಿರೀಕ್ಷಿಸಿ ನೋಡತೊಡಗಿದಳು. ಅಲ್ಲಿ ಮನೋಹರವಾದೊಂದು ಚಿಕ್ಕ ಅರಣ್ಯವಿತ್ತು. ಅರಣ್ಯದ ಒಂದು ಭಾಗದಲ್ಲಿ ಸುಂದರವಾದೊಂದು ದೇವದಾರುವಿನ ಮರ, ಸೊಕ್ಕಿನಿಂದ ಬೆಳೆದಿತ್ತು. ಹೊಸ ಚಿಗುರುಗಳಿಂದ ಮನೋಹರವಾಗಿತ್ತು. ಅದಕ್ಕೆ ತರತರದ ಬಣ್ಣದ ಸುವಾಸನೆಯ ಹೂವಿನ ಬಳ್ಳಿಗಳು ಹಬ್ಬಿದ್ದು ಅದರಲ್ಲಿ ಚಿತ್ರವಿಚಿತ್ರವಾದ ಪುಷ್ಪಮಂಜರಿಗಳು ಬಲು ನೇತ್ರಾನಂದವನ್ನುಂಟುಮಾಡುತ್ತಿದ್ದವು. ಅದೊಂದು ಪುಷ್ಪವಾಟಿಕೆಯಂತೆಯೇ ತೋರುತ್ತಿತ್ತು. ಅದರ ಬಳಿಯಲ್ಲೊಂದು ಗಂಡು ಚಿಗರೆಯು, ಹೆಣ್ಣುಚಿಗರೆ ಮೂರುನಾಲ್ಕು ಮರಿಗಳು ಇವುಗಳಿಂದ ಕೂಡಿಕೊಂಡು ಮೆಲುಕಾಡಿಸುತ್ತ ನಿಂತಿತ್ತು. ಮೇಲಿನ ಪುಷ್ಪಮಂಜರಿಗಳ ಮಧುರವಾದ ಮಧುರಸದ ಸೇವನೆಯಿಂದ ಉನ್ಮತ್ತವಾದ ಭ್ರಮರಗಳು ಮಧುರಸ್ವರದಿಂದ "ಗುಂಯಿ ಗುಂಯಿ" ಎಂದು ಹಾಡುತ್ತಿದ್ದವು. ಮೃಗವು ಆ ಮಧುರಸ್ವರವನ್ನು ಕೇಳುತ್ತ ಆನಂದದಿಂದ ಒಮ್ಮೊಮ್ಮೆ ತಾನೂ ತನ್ನ ಜ್ಞಾತಿಗನುಗುಣವಾದ ಧ್ವನಿಯನ್ನು ಮಾಡುತ್ತಿತ್ತು. ಆದರೆ ಮತ್ತೊಂದು ವಿಪರೀತಸ್ಥಿತಿಯೂ ಅಲ್ಲಿ ಕಂಡುಬರುತ್ತಿತ್ತು. ಆ ಮೃಗದ ಬಳಿಯಲ್ಲಿ ಪಶುಪ್ರಾಣಭಕ್ಷಕನಾದ ತೋಳನೂ ಸುಳಿದಾಡುತ್ತಿತ್ತು. ಅದು ತನ್ನ ಉದ್ದೇಶಸಾಧನೆಯ ಸಿದ್ಧತೆಯನ್ನು ಬಿಟ್ಟುಬಿಡದೆ ನಡಿಸಿತ್ತು. ಈ

ಸಂಗತಿಯು ಆ ಮೃಗಕ್ಕೆ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಆದರೆ ಅದು ಆ ಕಡೆಗೆ ನೋಡದೆ ತನ್ನ ಆನಂದದಲ್ಲಿಯೇ ಇತ್ತು.

"ಓಹೋ! ನೋಡಿದೆಯಾ! ನಿಷ್ಕರುಣಿಯಾದ ವ್ಯಾಧನ ಬಾಣದಿಂದ"— " ಶಂಕರನು ಈ ಮಾತನ್ನು ಹೇಳಲು ಆರಂಭಿಸುವಷ್ಟರಲ್ಲಿ, ಆ ಮೃಗದ ಆನಂದಮಯಸ್ಥಿತಿಯನ್ನು ನೋಡಿ ಶಾಂತಚಿತ್ತಳಾಗಿದ್ದ ಸತಿಯು, ಶರವಿದ್ಧ ಮೃಗದ ದೇಹವು ನೆಲಕ್ಕುರುಳಿದಂತೆಯೇ, ನೆಲಕ್ಕೆ ಕುಸಿಕೂತಳು. ಶಂಕರನು ಸತಿಯ ಅವಸ್ಥೆಯನ್ನು ನೋಡಿ ಅವಳ ಬಳಿಗೆ ಹೋಗಿ ಸಮಾಧಾನಪಡಿಸಿದನು. ಮತ್ತು ಈ ರೀತಿಯಾಗಿ ಅವಳಿಗೆ ಉಪದೇಶಮಾಡಿದನು:—

ಸತೀ, ಈ ಪ್ರಪಂಚದ ಅವಸ್ಥೆಯೇ ಹೀಗೆ. ಈಗ ನೀನು ನೋಡಿದ ಒಂದು ಸಾಮಾನ್ಯ ಸಂಗತಿಯಿಂದ ಇಡೀ ಪ್ರಪಂಚದ ತತ್ವವನ್ನು ಗ್ರಹಿಸಬಹುದು. ಈಗ ನೀನು ನೋಡಿದ ಅರಣ್ಯವೇ ದುಃಖಮೂಲವಾದ ಸಂಸಾರವು. ಆ ಪುಷ್ಪವಾಟಿಕೆಯಂತಿರುವ ದೇವದಾರು ವೃಕ್ಷವೇ ಗೃಹವು. ಮೃಗವೆಂಬದು ಜೀವವು. ಪುಷ್ಪವಾಟಿಕೆಯೊಳಗಿನ ಹೂವುಗಳೆಂದರೆ, ಕುಸುಮಕೋಮಲೆಯಾದ ಅಬಲೆಯು. ( ಪತ್ನಿಯು ) ಹೂವುಗಳೊಳಗಿನ ಮಧುರಸವು ಸ್ತ್ರೀಯಳ ಆಲಿಂಗನಾದಿ ಕ್ಷಣಿಕ ಇಂದ್ರಿಯಜನ್ಯ ಸೌಖ್ಯಕ್ಕೆ ಕಾರಣವಾದ ಅವಯವ ಸೌಂದರ್ಯಾದಿ ಮಾಧುರ್ಯವು. ಈ ತರದ ಅತ್ಯಲ್ಪ ಸುಖಕ್ಕಾಗಿ ಮೃಗರೂಪಿಯಾದ ಜೀವವು ಮಕ್ಕಳು ಮರಿಗಳು, ಆಪ್ತೇಷ್ಟರು ಇತ್ಯಾದಿ ಚಿಕ್ಕ ಚಿಕ್ಕ ಮೃಗಗಳೊಂದಿಗೆ ಅಲ್ಲಿ ವಾಸವಾಗಿರುವದು. ಹಾಗು ಇವುಗಳ ಮೂಲಕವಾಗಿಯೇ ಮನುಷ್ಯನ ಅಹಂಕಾರ ಮಮಕಾರಗಳೂ ರಾಗ ದ್ವೇಷಾದಿಗಳೂ ಉದ್ಭವಿಸುವವು. ಭ್ರಮರಗಳ ಮಧುರ ಗಾಯನವೆಂದರೆ ಪ್ರಿಯಪತ್ನಿಯ ಏಕಾಂತವಾಸದೊಳಗಿನ ಮಧುರವಾದ ಪ್ರೇಮಸಲ್ಲಾಪಗಳು; ಮುದ್ದುಮಕ್ಕಳ ತೊದಲುನುಡಿಗಳು. ಇವುಗಳನ್ನು ಕೇಳಿ ಮೃಗರೂಪಿಯಾದ ಮನುಷ್ಯನು ಮೋಹಿತನಾಗುವನು. ಇನ್ನು ಇವುಗಳ ವಿರುದ್ಧ ಸಂಗತಿಗಳು; ವರ್ಷ, ಮಾಸ, ದಿವಸ, ತಾಸು, ನಿಮಿಷ ಇವೇ ತೋಳ. ಇವು ಜೀವನ ಆಯುಷ್ಯವನ್ನು ಪ್ರತ್ಯಕ್ಷವಾಗಿ ಹರಣಮಾಡುವವು. ಆದರೆ ಜೀವನಿಗೆ ಆ ಕಡೆಗೆ ಲಕ್ಷವೇ ಇಲ್ಲದೆ ತನ್ನ ಆನಂದದಲ್ಲಿಯೇ ಕಾಲಕಳೆಯುತ್ತಿರುವನು. ಈ ಸಮಯದಲ್ಲಿ ಮೃತ್ಯುವೆಂಬ ವ್ಯಾಧನು ಅದರ ಹಿಂದೆಹಿಂದೆ ಅವಿತು ಅಲೆದಾಡುತ್ತ ಸಮಯವನ್ನು ನಿರೀಕ್ಷಿಸುತ್ತಿರುವನು. ( **ಶ್ವಸ್ತು:**

**सहैव यात्येष समयं संप्रतीक्षते )** ಮೃತ್ಯುವಿನ ಬಾಣಗಳೆಂದರೆ ಜ್ವರಾದಿ ರೋಗಗಳು. ಮೃತ್ಯುವು ತನ್ನ ಜ್ವರವೇ ಮೊದಲಾದ ಶರಗಳಿಂದ ಮೃಗದ (ಮನುಷ್ಯನ) ಪ್ರಾಣವನ್ನು ಹರಣಮಾಡುತ್ತಿರುವನು. ಅಂದಬಳಿಕ ಉಳಿಯಿತಿನ್ನೇನು? ಮಾನವಪ್ರಾಣಿಗಳು ಸದಾ ಈ ತರದ ವಿವೇಕವಿಚಾರದಲ್ಲಿಯೇ ಇದ್ದು ಕೊಂಡು ಸನ್ಮಾರ್ಗದಿಂದ ನಡೆಯಬೇಕು. ತಾನು, ತನ್ನವು ಎಂಬ ಅಹಂಕಾರವನ್ನು ತೊರೆದು ಸಾಧ್ಯವಾದಷ್ಟು ಪರೋಪಕಾರವನ್ನು ಮಾಡುತ್ತಿರಬೇಕು; ಅಂದರೆ ತೀರಿತು. **ಇದೇ ಪ್ರಪಂಚದೊಳಗಿನ ಪವಿತ್ರವಾದ ಧರ್ಮವು.**"

ಕೈಲಾಸಪತಿಯ ಮಾತುಗಳನ್ನು ಕೇಳಿ ಸತಿಗೆ ಪರಮಾನಂದವಾಯಿತು. ಅವಳು ಹೇ! ಜಗದುದ್ಧಾರಕನೇ, ನಿಮ್ಮ ಉಪದೇಶಾಮೃತಸೇವನೆಯಿಂದ ಭೂಲೋಕದ ಸಕಲಪ್ರಜೆಗಳೂ ಅಮರರಾಗಲಿ; ಎಂದು ಆಶೀರ್ವದಿಸಿದಳು.



## ಏಳನೆಯ ಪರಿಚ್ಛೇದ.

# ಯಜ್ಞೋತ್ಸವ.



ಇಂತು ಸತೀದೇವಿಯು ಕೈಲಾಸಪತಿ ಶಂಕರನೊಡನೆ ಕೈಲಾಸಗಿರಿಯಲ್ಲಿ ಆನಂದದಿಂದ ಕಾಲಕಳೆಯುತ್ತಿರಲು ಒಮ್ಮೆ ತಪೋಧನನಾಗಿದ್ದ ಭೃಗುಮುನಿಯು ಸಕಲ ದೇವತಾಸಂತುಷ್ಟಿಗಾಗಿ ಒಂದು ಮಹಾಯಜ್ಞವನ್ನು ಹಮ್ಮಿದನು. ಹರಿ-ಹರ-ಬ್ರಹ್ಮೇಂದ್ರಾದಿ ಸಕಲ ದೇವತೆಗಳೂ ಆ ಮಹಾಯಜ್ಞಕ್ಕೆ ಆಮಂತ್ರಿತರಾಗಿದ್ದರು. ಇಂಥ ವೈಭವಯುಕ್ತವಾದ ಯಜ್ಞಸಮಾರಂಭವು ಇನ್ನೆಲ್ಲಿಯೂ ಆಗಿಲ್ಲವೆಂದು ಎಲ್ಲರೂ ಅನ್ನುತ್ತಿದ್ದರು. ೩೩ ಕೋಟಿ ದೇವತೆಗಳೂ ಯಜ್ಞಮಂಟಪದಲ್ಲಿ ತಮತಮಗುಚಿತವಾದ ಆಸನದಲ್ಲಿ ಆನಂದದಿಂದ ಕುಳಿತಿದ್ದರು. ಮಧ್ಯದಲ್ಲಿ ಸಕಲ ಚರಾಚರಗಳ ಮಂಗಲಕರನಾದ ಶಂಕರನೂ ಎಡಬಲಗಳಲ್ಲಿ ಬ್ರಹ್ಮ ವಿಷ್ಣುಗಳೂ ಉಚ್ಚಾಸನದಲ್ಲಿ

ಒಪ್ಪುತ್ತಿದ್ದರು. ಸುತ್ತಲೂ ದೇವತೆಗಳು ಕುಳಿತಿದ್ದರು. ಯಜ್ಞವೇದಿಕೆಯ ಬಳಿಯಲ್ಲಿ ಭೃಗುಮುನಿಯು ಹವನಕಾರ್ಯವನ್ನು ನಡಿಸುತ್ತಿದ್ದನು. ಬಹುಜನ ಋತ್ವಿಜರು ಕುತ್ತಿಗೆಯು ಶಿರಗಳನ್ನು ಉಬ್ಬಿಸಿಕೊಂಡು ಅನನ್ಯಮಾನಸರಾಗಿ ವೇದಮಂತ್ರಗಳನ್ನು ಸ್ವರಬದ್ಧವಾಗಿ ಪಠಿಸುತ್ತಿದ್ದರು. ಆ ವೇದಘೋಷದ ಮಂಜುಳವೂ ಮನೋಹರವೂ ಆದ ಸ್ವರಲಹರಿಯಿಂದ ದೇವಗಣಕ್ಕೆ ಮಿತಿಯಿಲ್ಲದಷ್ಟು ಆನಂದವಾಗುತ್ತಿತ್ತು. ಇಂಥ ಸಮಯದಲ್ಲಿ ಪ್ರಜಾಪತಿ ದಕ್ಷಮಹಾರಾಜನು ಆ ದೇವಸಭೆಯನ್ನು ಪ್ರವೇಶಿಸಿದನು. ಇದನ್ನು ನೋಡಿ ಬ್ರಹ್ಮ, ವಿಷ್ಣು, ಶಂಕರ ಇವರು ಹೊರತಾಗಿ ಉಳಿದವರೆಲ್ಲರೂ ಎದ್ದುನಿಂತು ಅವನನ್ನು ಸನ್ಮಾನಿಸಿದರು. ದಕ್ಷರಾಜನು ಬ್ರಹ್ಮವಿಷ್ಣುಗಳಿಗೆ ಸಾಷ್ಟಾಂಗವೆರಗಿದನು. ಅವರೂ ಪ್ರೀತಿಯಿಂದ ಅವನನ್ನು ಹಿಡಿದೆತ್ತಿ ಅಪ್ಪಿಕೊಂಡು ಆಶೀರ್ವದಿಸಿ ಸನ್ಮಾನಿಸಿದರು. ಇದರಿಂದ ದಕ್ಷನಿಗೆ ತುಂಬಾ ಸಂತೋಷವಾಯಿತು. ಆ ಮನದೊಳಗಿನ ಸಂತೋಷವು ಮುಖದಲ್ಲಿ ಒಡೆದು ಕಾಣಿಸಿತು. ಆದರೆ ಈ ಸ್ಥಿತಿಯು ಪರಕ್ಷಣದಲ್ಲಿಯೇ ತೀರ ಬದಲಾಗಿಹೋಯಿತು.

ಕೈಲಾಸಪತಿ ಶಂಕರನು ಮಾವನಾದ ದಕ್ಷರಾಜನ ಆಗಮನಕಾಲದಲ್ಲಿ ಸನ್ಮಾನ ತೋರಿಸುವದಕ್ಕಾಗಿ ತನ್ನ ಆಸನವನ್ನು ಬಿಟ್ಟು ಎದ್ದಿರಲಿಲ್ಲ. ಇದನ್ನು ಕಂಡು ಅಭಿಮಾನಿಯಾದ ದಕ್ಷರಾಜನು ಅಳಿಯನು ತನ್ನನ್ನು ಬೇಕೆಂದು ಅಪಮಾನಮಾಡಿದನೆಂದು ಭಾವಿಸಿದನು. ಸತಿಯ ವಿವಾಹಕಾಲದಲ್ಲಿ ಹುಟ್ಟಿದ 'ಶಂಕರನು ತನ್ನ ವೈಭವಕ್ಕೆ ಅನುರೂಪನಾದ ಅಳಿಯನಲ್ಲ' ಎಂಬ ದುರ್ವಿಚಾರವೊಂದು ಆತನ ಮನಸಿನಲ್ಲಿ ಇಂದಿಗೂ ಕುದಿಯುತ್ತಲೇ ಇತ್ತು. ನಾಲ್ಕು ಜನರು ನೆರೆದಲ್ಲಿ ಏನಾದರೊಂದು ಕಾರಣದಿಂದ ಕೈಲಾಸಪತಿಯ ಹೆಸರು ಬಂದರೂ ದುರಭಿಮಾನಿಯಾದ ದಕ್ಷನಿಗೆ ಅದು ಸಹನವಾಗುತ್ತಿರಲಿಲ್ಲ. ಶಿವನು ತನ್ನ ಅಳಿಯನೆಂದು ಹೇಳಲು ಅವನಿಗೆ ಬಲು ನಾಚಿಕೆ! ಮೂರುಜನ್ಮದ ಕಡುವೈರಿಯಾದವನ ಹೆಸರನ್ನು ಕೂಡ ಎತ್ತದಿರುವಂತೆ, ದಕ್ಷನು ಅಂಥ ಪ್ರಸಂಗವೇ ಬಂದರೆ ಆ ಜೋಗಿ, ಆ ಬೂದಿಬಡಕ, ಆ ಮಸಣದ ತಿರುಕ ಈ ರೀತಿಯಾಗಿ ಬಾಯಿಗೆ ಬಂದಂತೆ ತಿರಸ್ಕರಿಸಿ ಅಡ್ಡ ತಿಡ್ಡ ಮಾತಾಡುವನು. ಇಂಥ ಸ್ಥಿತಿಯಲ್ಲಿ ಇಂದು ಈ ದೇವಸಭೆಯಲ್ಲಿ ಶಂಕರನು ಬೇಕೆಂದು ತನಗೆ ಅಪಮಾನಮಾಡಿದನೆಂದು ದಕ್ಷನು ತಿಳಿದುಕೊಂಡದ್ದರಲ್ಲಿ ಆಶ್ಚರ್ಯವಾದರೂ ಏನು? ಭೃಗುಮು

ನಿಯು ಯಜ್ಞಕುಂಡದ ಅಗ್ನಿಗಿಂತಲೂ ದಕ್ಷನ ಅಂತರಂಗದ ಅಭಿಮಾನಜನ್ಯವಾದ ರೋಷಾಗ್ನಿಯೇ ಬಲು ಪ್ರಜ್ವಲಿತವಾಗಿ ತೋರಿತು. ಅವನು ಉರಿದುರಿದು ಬೀಳಹತ್ತಿದನು. ಏನಾದರೇನಾಯಿತು? ಸದಾ ಶಾಂತನಾದ ಶಂಕರನ ಮನಸ್ಸು ಮಾತ್ರ ತೀರ ಶಾಂತವಾಗಿಯೇ ಇತ್ತು. ಅವನಿಗೆ ಎಷ್ಟು ಸ್ವಾಭಿಮಾನವೋ ಅಷ್ಟೇ ಪರರ ಅಭಿಮಾನ. ತನಗೇ ಮಾನಾಪಮಾನದ ಭೇದವಿಲ್ಲದವನಿಗೆ ಮಾವನ ಮಾನಾಪಮಾನದ ಗೊಡವೆಯೆಲ್ಲಿಯದು?

ಬ್ರಹ್ಮವಿಷ್ಣುಗಳಿಗೆ ದಕ್ಷನ ಕೋಪದ ವಾರ್ತೆ ತಿಳಿಯಿತು. ಅವರು ದಕ್ಷನನ್ನು ಕರೆದು ಸಮಾಧಾನಪಡಿಸಲು ಯತ್ನಿಸಿದರು. ಆದರೆ ಯಾವುದರಿಂದಲೂ ಆತನ ಮನಸ್ಸು ಸಮಾಧಾನವಾಗಲಿಲ್ಲ. ಕೈಲಾಸಪತಿಯ ಹೆಸರಿನ ನೆನಪಾದ ಕೂಡಲೆ ಅವನ ಮನಸ್ಸು ಅವನ ಅಂಕಿತದಲ್ಲಿ ಉಳಿಯದು. “ಎಂದಾದರೂ ಒಂದುದಿನ ಈ ಸೇಡನ್ನು ತೀರಿಸಿದರೇ ನನ್ನ ಹೆಸರು ದಕ್ಷ. ದಕ್ಷನ ಕಾರ್ಯದಕ್ಷತೆಯನ್ನು ಒಮ್ಮೆ ಈ ತಿರುಕನು ನೋಡಲಿ! ಎಂದು ಮನದಲ್ಲಿ ದೃಢಪ್ರತಿಜ್ಞೆಯನ್ನು ಮಾಡಿದನು.

ಭೃಗುಮುನಿಯ ಯಜ್ಞಸಮಾಪ್ತಿಯಾದ ತರುವಾಯ ದೇವತೆಗಳೆಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು. ಶಂಕರನೂ ತನ್ನ ಪರಿವಾರದೊಂದಿಗೆ ಕೈಲಾಸಗಿರಿಗೆ ಬಂದು ನಡೆದ ವೃತ್ತಾಂತವನ್ನೆಲ್ಲಾ ಸತಿಗೆ ಉಸುರಿದನು. ಸತಿಗೆ ತಂದೆಯ ಈ ತರದ ದುರಭಿಮಾನವನ್ನು ಕೇಳಿ ಬಲು ವಿಷಾದವಾಯಿತು. ಅವಳು ಪ್ರಭುವೇ, ಈ ಲೋಕದಲ್ಲಿ ಜನರು ಯಾಕೆ ಈ ರೀತಿಯಾಗಿ ಅಹಂಕಾರಾಗ್ನಿಯಿಂದ ಬೆಂದು ಬೆಂಡಾಗಿ ತಮ್ಮ ಸಕಲ ಸೌಖ್ಯಕ್ಕೂ ಎರವಾಗುತ್ತಿರುವರು? ಅಹಂಕಾರವೆಂಬ ವಿಷವನ್ನು ತಮ್ಮ ಈ ಪ್ರಪಂಚದೊಳಗಿನ ಅಮೃತಸಮಾನವಾದ ಶಾಂತಿರಸದೊಡನೆ ಮಿಶ್ರಮಾಡಿಕೊಂಡು ಸರ್ವವನ್ನೂ ಯಾಕೆ ಕೆಡಿಸಿಕೊಳ್ಳುತ್ತಿರುವರು?

**ಶಂಕರ:**—ಸತೀ, ನಿನಗೆ ಏನೆಂದು ಉತ್ತರವನ್ನು ಹೇಳಲಿ? ಪ್ರಪಂಚವು ನಡೆಯಲಿಕ್ಕೆ ಅಭಿಮಾನವು ಬೇಕೇಬೇಕು. ಅಭಿಮಾನವಿಲ್ಲದಿದ್ದರೆ ಮನುಷ್ಯನು ಮನುಷ್ಯನೆನಿಸಿಕೊಳ್ಳಲಾರನು. ನಾನು, ನನ್ನದು, ನನ್ನವರು ಎಂಬ ಅಭಿಮಾನವೇ ಈ ಪ್ರಪಂಚದ ಅಭಿವೃದ್ಧಿಗೆ ಕಾರಣವು. ತಾಯಿಗೆ ತನ್ನ ಮಗುವೆಂಬ

ಅಭಿಮಾನವಿಲ್ಲದಿದ್ದರೆ ಅವಳು ಅದಕ್ಕೆ ಹಾಲುಣಿಸಿ ಬೆಳಿಸಲಾರಳು. ಗಂಡನು ಹೆಂಡತಿಯನ್ನು ಕಾಪಾಡಲಿಕ್ಕಿಲ್ಲ. ತಾಯಿಯು ಕರುವಿಗೆ ಮೊಲೆಯುಣಿಸದು. ಮನುಷ್ಯನು ಭೂಮಿಯನ್ನು ಬಿತ್ತಿಬೆಳೆಯನು. ಅರ್ಥಾತ್ ಪ್ರಪಂಚದ ಸರ್ವ ಕಾರ್ಯಗಳ ಪ್ರವೃತ್ತಿಗೂ ಈ ತರದ “ ತಾನು, ತನ್ನದು ” ಎಂಬ ಅಭಿಮಾನವೇ ಕಾರಣವು. ಅರ್ಥಾತ್ ಅಭಿಮಾನವು ಪ್ರಪಂಚದ ನಾಶಕ್ಕೆ ಕಾರಣವಲ್ಲ. ಆದರೆ ಈ ತೆರದ ಅಭಿಮಾನವನ್ನು ಬೆಳಿಸಿಕೊಂಡು ಅದಕ್ಕೆ ದುರಭಿಮಾನದ ಸ್ವರೂಪ ವನ್ನು ಕೊಡುವದು ಮಾತ್ರ ಬಲು ಕೆಟ್ಟದು; ಅದೇ ಸರ್ವ ನಾಶಕ್ಕೆ ಕಾರಣ ವಾಗುವದು. ಅಭಿಮಾನಕ್ಕೆ ದುರಭಿಮಾನದ ಸ್ವರೂಪವು ಬಾರದಿರುವಂತೆ ಮಾಡಲು ಒಂದು ಉಪಾಯವುಂಟು. ನಾನು, ನಾನು ಎಂದು ಸಕಲರೂ ಹೇಳುತ್ತಿರುವರಲ್ಲವೇ? ಆದರೆ ನಾನೆಂದರೆ ಏನೆಂಬದನ್ನು ತಿಳಿದವರು ತೀರ ವಿರಳ. “ ನಾನು ” ಎಂದರೆ ಏನೆಂಬದನ್ನು ಸರಿಯಾಗಿ ತಿಳಿದುಕೊಂಡರೆ ಈ ಅಭಿಮಾನ ಸರ್ಪದ ಹಲ್ಲುಗಳನ್ನು ಕಿತ್ತುಚಲ್ಲಿದಂತಾಗುವದು. ಸತೀ, ಈ ಜಗತ್ತಿನಲ್ಲಿ ಸಕಲರೂ “ ನಾನು, ನಾನು ” ಎನ್ನುತ್ತಾರೆ. ಅಷ್ಟೇ ಏಕೆ? ಒಬ್ಬ ಮನುಷ್ಯನನ್ನು ಕರೆದು ಪ್ರಶ್ನಮಾಡುತ್ತ ಹೋದರೆ, ಅವನು ನನ್ನ ಕೈ, ನನ್ನ ಕಾಲು ನನ್ನ ಕಣ್ಣು, ನನ್ನ ಶರೀರ, ನನ್ನ ಇಂದ್ರಿಯಗಳು, ನನ್ನ ಪ್ರಾಣ, ನನ್ನ ಮನಸ್ಸು, ನನ್ನ ಬುದ್ಧಿ ಎಂದು ಹೇಳುವನು. ಅಂದಮೇಲೆ ಇವುಗಳಲ್ಲಿ ಯಾವದೂ ‘ನಾನು’ ಎಂಬ ಸರ್ವನಾಮದ ಅರ್ಥಸೂಚಕವಲ್ಲವೆಂದಂತಾಯಿತು. ಇವೆಲ್ಲವುಗಳಿಂದ ಹೊರತಾಗಿ “ ಆತ್ಮ ” ಎಂಬದೊಂದು ಬೇರೆಯೇ ಇರುವದು. ಅದೇ ಈ ಸರ್ವ ನಾಮದ ಅರ್ಥಸೂಚಕವು. ಹಾಗು “ **आत्मा च परमात्मा च पर्यायो नात्रभेदधीः** ” ಅಂದರೆ ಆತ್ಮ ಮತ್ತು ಪರಮಾತ್ಮ ಇವು ಪರ್ಯಾಯವಾಚಕ ಶಬ್ದಗಳು; ಇವುಗಳ ಅರ್ಥದಲ್ಲಿ ಭೇದವಿಲ್ಲ, ಎಂಬದು ಪ್ರತಿಯೊಬ್ಬನೂ ತಿಳಿದು ಕೊಂಡು ನಡೆಯತಕ್ಕ ಮಾತಾಗಿರುವದು. ಈ ರೀತಿಯಾಗಿ ಸಕಲ ಚರಾ ಚರಗಳೂ ಸೃಷ್ಟಿಕರ್ತನ ಸಂಗಡ ಐಕ್ಯತೆಗೆ ಅರ್ಹವಾಗಿರುವವೆಂದಮೇಲೆ ಮನುಷ್ಯನ “ ನಾನು, ನೀನು, ಅವನು ” ಎಂಬ ಭೇದಭಾವನೆಯೂ ಅಹಂಕಾ ರವೂ ಸಹಜವಾಗಿ ಅಳಿದುಹೋಗುವವು. ಈ ರೀತಿಯಾದ ಭೇದಭಾವವು ಅಳಿದುಹೋಯಿತೆಂದರೆ ಸರ್ವಪ್ರಾಣಿಗಳನ್ನೂ ಸಮಭಾವದಿಂದ ನೋಡಲು ಮನುಷ್ಯನು ಸಮರ್ಥನಾಗುವನು. ಅರ್ಥಾತ್ ಅವನಲ್ಲಿ ಭೂತದಯೆಯು

ಅಂತಿಮ ಸ್ವರೂಪವು ಉದ್ಭವಿಸುವದು. ಈ ಭಾವನೆಯು ಹುಟ್ಟಬೇಕಾದರೆ ಸೃಷ್ಟಿಯೊಳಗಿನ ಸಕಲ ಚರಾಚರಗಳೂ ಅವುಗಳ ಕರ್ತನ ಅಂಶವಾಗಿರುವ ವೆಂಬದು ಹೃದಯಪುಟದಲ್ಲಿ ಅಂಕಿತವಾಗಬೇಕು.

**ಸತಿ:**—" ಜಗತ್ಪಿತನೇ, ನಿಮ್ಮ ಮಾತಿನ ಭಾವವು ತಿಳಿಯಿತು. ನಾನಿಂದು ಧನ್ಯಳಾದೆನು." ಎಂದು ಪತಿಯ ಪಾದಕ್ಕೆ ಎರಗಿದಳು. ಮತ್ತು ತಂದೆಯ ಅಜ್ಞಾನಮೂಲಕವಾದ ದುರಭಿಮಾನಕೃತ ಅಪರಾಧವನ್ನು ಜ್ಞಾನಿಗಳಾದ ತಾವು ಕ್ಷಮಿಸಬೇಕೆಂದು ಬೇಡಿಕೊಂಡಳು. ಕೈಲಾಸಪತಿಯು, " ಸತೀ, ನನಗೇನು? ಜನರು ಸ್ತುತಿಸಿದರೂ ಒಂದೇ, ನಿಂದಿಸಿದರೂ ಒಂದೇ; ಪೂಜಿಸಿದರೂ ಒಂದೇ, ಪೀಡಿಸಿದರೂ ಒಂದೇ; ನಾನು ಅವರನ್ನು ಎಂದೂ ತಿರಸ್ಕರಿಸೆನು. ಅವರ ಸೇಡುತೀರಿಸಿಕೊಳ್ಳಲು ಯತ್ನಿಸೆನು. ಅಂದಬಳಿಕ ನೀನು ನಿನ್ನ ತಂದೆಯ ಅಪರಾಧಗಳಿಗಾಗಿ ಕ್ಷಮೆಯನ್ನು ಬೇಡುವ ಕಾರಣವೇ ಉಳಿಯಲಿಲ್ಲ." ಎಂದು ಸಮಾಧಾನಪಡಿಸಿದನು.

ಇತ್ತ ನಿರಹಂಕಾರಿಯಾದ ಕೈಲಾಸಪತಿಯು ಈ ರೀತಿಯಾಗಿ ನಿರಭಿಮಾನತೆಯಿಂದ ವಿಚಾರಮಾಡುತ್ತಿರಲು ಅತ್ತ ದಕ್ಷಪುರಿಗೆ ತೆರಳಿದ ದಕ್ಷರಾಜನ ಅಂತರಂಗದ ದುರಭಿಮಾನಜನ್ಯವಾದ ತನ್ನ ಅಪಮಾನದ ಸೇಡುತೀರಿಸಿಕೊಳ್ಳುವ ಯೋಚನೆಯು ಮನಸ್ಸನ್ನು ಕ್ಷಣಕ್ಷಣಕ್ಕೆ ಹೆಚ್ಚು ಹೆಚ್ಚು ಪೀಡಿಸಹತ್ತಿತ್ತು. ಅವನು ಒಂದು ಉಪಾಯವನ್ನು ಯೋಚಿಸಿದನು, " ಭೃಗುಮುನಿಯ ಯಜ್ಞಸಮಾರಂಭದ ಕಾಲದಲ್ಲಿ ಆ ಮಸಣದ ತಿರುಕನು ನನ್ನನ್ನು ಅಪಮಾನಪಡಿಸಿದನಲ್ಲವೇ? ಅದರಿಂದ ಇನ್ನುಮುಂದೆ ಯಾರೂ ಯಜ್ಞಸಮಾರಂಭಕ್ಕೆ ಆ ಬೂದಿಬಡಕನನ್ನು ಕರೆಯಕೂಡದೆಂದು ಆಜ್ಞಾಪಿಸುವೆನು. ಎಲ್ಲರೂ ಶಿವಹೀನಯಜ್ಞವನ್ನು ಮಾಡಬೇಕು. ಇದೇ ಶಿಕ್ಷೆ!" ಎಂದು ಭಾವಿಸಿ ದಕ್ಷಪ್ರಜಾಪತಿಯು ಸಕಲರೂ ಶಿವನನ್ನು ಕರೆಯದೆ ಯಜ್ಞಮಾಡಬೇಕೆಂದು ಆಜ್ಞಾಪಿಸಿದನು, ಸರಿ; ಆದರೆ ಶಿವಹೀನಯಜ್ಞವನ್ನು ಮಾಡಲು ಯಾರೂ ಮುಂದುವರಿಯಲಿಲ್ಲ. ಇತ್ತ ದಕ್ಷಪ್ರಜಾಪತಿಯ ಮಾತು ಮೀರುವದೂ ಆಗದು! ಅತ್ತ ಸಕಲ ಮಂಗಳಕರನಾದ ಶಂಕರನನ್ನು ಕರೆಯದಿರುವದೂ ಆಗದು. ಹೀಗಾಗಿ ಜನರು ಯಜ್ಞವನ್ನು ಮಾಡುವ ಹವ್ಯಾಸಕ್ಕೇ ಕೈಹಾಕಲಿಲ್ಲ. ದಕ್ಷನ ಮನಸಿಗೆ ಸಮಾಧಾನ

ವಿಲ್ಲ. ಎಂದು ಶಿವಹೀನಯಜ್ಞವಾದದ್ದನ್ನು ನೋಡುವೆನೋ ಎಂದು ನನ್ನ ಅಪಮಾನದ ಸೇಡುತೀರಿಸಿಕೊಳ್ಳುವೆನೋ ಎಂದು ಚಡಪಡಿಸುತ್ತಿದ್ದ ದಕ್ಷನಿಗೆ ಹೊತ್ತೇ ಹೋಗದು. ಕಡೆಗೆ ತಾನೇ ಶಿವಹೀನಯಜ್ಞವನ್ನು ಮಾಡಬೇಕೆಂದು ನಿಶ್ಚಯಿಸಿದನು.

ದಕ್ಷಪುರಿಯಲ್ಲಿ ಮಹಾ ಕೋಲಾಹಲಕ್ಕೆ ಆರಂಭವಾಯಿತು. ನೀಲಧಾರೆಯ ದಂಡೆಯುಗುಂಟ ಯಜ್ಞಮಂಟಪವನ್ನು ನಿರ್ಮಿಸಿದನು. ಸಣ್ಣ ದೊಡ್ಡ ಗಿಡ ಮರಗಳನ್ನೆಲ್ಲಾ ಕಡಿದು ಕಲ್ಲುಗಳನ್ನು ಒಡೆದು ನೆಲವನ್ನು ಸಮಮಾಡಿದರು. ಲಕ್ಷಾವಧಿ ಜನರು ನೆರೆಯಬೇಕೆಂದು ದಕ್ಷಬ್ರಹ್ಮನ ಉದ್ದೇಶ. ಅಷ್ಟೆಲ್ಲ ಜನರ ಆದರೋಪಚಾರಗಳನ್ನು ಸರಿಯಾಗಿ ಮಾಡುವದಕ್ಕಾಗಿ ಬೇರೆ ಬೇರೆ ಅಧಿಕಾರಿಗಳು ನಿಯಮಿಸಲ್ಪಟ್ಟರು. ತ್ರಿಭುವನಸಂಚಾರಿಗಳಾದ ನಾರದರು ಸಕಲ ದೇವತೆಗಳನ್ನೂ ಭೂಮಿಯ ಮೇಲಿನ ಸಕಲ ರಾಜರನ್ನೂ ಪ್ರಜೆಗಳನ್ನೂ ಕರೆಯುವ ಭಾರವನ್ನು ವಹಿಸಿಕೊಂಡಿದ್ದರು. ಆದರೆ ಕೈಲಾಸಪುರಿಗೆ ಮಾತ್ರ ಆಮಂತ್ರಣವನ್ನು ಹೇಳಕೂಡದೆಂದು ಅವರಿಗೆ ದಕ್ಷನ ಕಟ್ಟಪ್ಪಣೆಯಾಗಿತ್ತು. ನಾರದರಿಗೆ ಮನಸಿನಲ್ಲಿಯೇ ನಗೆ. ಯಾರಿಗಾದರೂ ನಗೆಬರುವ ಮಾತೇ ಸರಿ. ದೇವಾದಿದೇವನಾದ ಕೈಲಾಸಪತಿ ಶಂಕರನನ್ನು ಕರೆಯದೆ ಯಜ್ಞವನ್ನು ಮಾಡಬೇಕೆಂಬದು ದಕ್ಷನ ಕೋರಿಕೆ. ಇದು ಎಷ್ಟು ಅಯೋಗ್ಯವಾದದ್ದೆಂಬದು ಪ್ರಜಾಪತಿ ದಕ್ಷನಿಗೇ ತಿಳಿಯಲಿಲ್ಲ! ದೇವತೆಗಳಿಗೆಲ್ಲರಿಗೂ ದಕ್ಷನ ಈ ತರದ ಅವಿಚಾರವನ್ನು ಕೇಳಿ ಮನಸಿನಲ್ಲಿ ಬಲು ವಿಷಾದವಾಯಿತು. ಆದರೆ ಏನುಮಾಡಬೇಕು? ದಕ್ಷನ ಮುಂದೆ ಹೋಗಿ ಮಾತಾಡಲು ಯಾರಿಗೆ ಧೈರ್ಯವಿರುವದು? ಅವರೆಲ್ಲರೂ "ಏನಾಗುವದೋ ಆಗಲಿ, ನೋಡೋಣ," ಎಂದು ಸುಮ್ಮನಾದರು. ದಕ್ಷನು ಯಜ್ಞದ ಸಿದ್ಧತೆಯಲ್ಲಿ ಅನನ್ಯಮಾನಸನಾಗಿ ತೊಡಕಿಕೊಂಡಿದ್ದನು. ಪರಿಣಾಮವು ವೇನಾಗುವದೋ ನೋಡಬೇಕು.

## ಎಂಟನೆಯ ಪರಿಚ್ಛೇದ.



## ಉಭಯಸಂಕಟ.



ಸರ್ವ ಮಂಗಳಾಶ್ರಮವಾದ ಕೈಲಾಸಗಿರಿಯಲ್ಲಿ ಋತುಭೇದ ವಿರಲಿಲ್ಲವೆಂದು ಹಿಂದೊಮ್ಮೆ ಹೇಳಿರುವೆವು. ಅಲ್ಲಿ ಸದಾ ವಸಂತಕಾಲವೇ. ಆದರೂ ಒಂದೊಂದು ಕಾಲದಲ್ಲಿ ವಿಶೇಷ ಸ್ಥಿತಿಯು ಕಂಡುಬರುತ್ತಿತ್ತು. ಒಮ್ಮೆ ಕೈಲಾಸಗಿರಿಯು ಮೇಲಿನ ಸಕಲ ಗಿಡಗಳೂ ಚಿಗುರ ಎಳೆ ಎಲೆಗಳಿಂದ ಕಂಗೊಳಿಸಹತ್ತಿದವು. ಕೆಂಪು, ಬಿಳಿದು, ಅರಶಿನ ಬಣ್ಣದ ತರತರದ ಹೂಗಳ ಗೊಂಚಲುಗಳಿಂದ ಗಿಡಬಳ್ಳಿಗಳೆಲ್ಲಾ ಮುಚ್ಚಿಹೋಗಿದ್ದವು. ಕೆಳಗೆ ಚಿಕ್ಕ ದೊಡ್ಡ ಜಲಪ್ರವಾಹಗಳು 'ಗುಳು ಗುಳು' ನಾದದೊಡನೆ ಪ್ರವಹಿಸುತ್ತಿದ್ದವು. ಒಟ್ಟಿಗೆ ಕೈಲಾಸಗಿರಿಯು ಉಪವನವು ಹೊಸ ಹೊಸ ಹೂಗಳಿಂದಲೂ ಅವುಗಳಲ್ಲಿ ಹಾರಾಡುವ ಭ್ರಮರಗಳ ಝೇಂಕಾರದಿಂದಲೂ ಒಪ್ಪುತ್ತಿತ್ತು. ಅಂಜುಳಿಗಳಾದ ಕಸ್ತೂರೀಮೃಗಗಳೂ, ಚಿಗರೆಗಳೂ ಹೊಸ ಹುಲ್ಲಿನ ಪ್ರೀತಿಯಿಂದ ಮೇಲೆ ಮೇಲೆ ಅತ್ತಿತ್ತ ಓಡಾಡುತ್ತ ಮೇಯುತ್ತಿದ್ದವು.

ಪರ್ವತದ ಒಂದು ಉನ್ನತವಾದ ಶಿಖರದಮೇಲೆ ಕೈಲಾಸಪತಿಯ ಅರಮನೆಯಿರುವದು. ಸುತ್ತಲೂ ದೇವದಾರುವಿನ ಗಿಡಗಳ ದಟ್ಟಡವಿ. ಅರಮನೆಯ ಸುತ್ತಣ ಪ್ರದೇಶವು ರಮಣೀಯವಾಗಿಯೂ ಶಾಂತವಾಗಿಯೂ ಇತ್ತು. ತಪೋವನದ ಗಾಂಭೀರ್ಯದೊಡನೆ ಉಪವನದ ಸೌಂದರ್ಯವು ಕೂಡಿದುದರಿಂದ ಆ ಸ್ಥಳವು ತಪಶ್ಚರ್ಯೆಗೂ ಪ್ರಪಂಚಕ್ಕೂ ಯೋಗ್ಯವಾದದ್ದಾಗಿತ್ತು. ಅರಮನೆಯಿಂದ ಕೊಂಚ ದೂರದಲ್ಲಿ ಶಾಖೋಪಶಾಖೆಗಳಿಂದ ವಿಸ್ತೀರ್ಣವಾದ ಒಂದು ಪ್ರಾಚೀನ ದೇವದಾರು ವೃಕ್ಷವಿತ್ತು. ಅದರ ಕೆಳಗೆ ಸೃಷ್ಟಿದೇವತೆಯು ಸೃಷ್ಟಿಸಿದ ಒಂದು ವಿಶಾಲವಾದ ಹಾಸುಗಲ್ಲಿನ ನುಣುಪಾದ ಆಸನವಿತ್ತು. ಅದರ ಮೇಲೆ ಚಿಕ್ಕದೊಂದು ಸಿಂಹಾಸನ. ಒಂದು ದಿನ ಸಾಯಂಕಾಲದಲ್ಲಿ ಕೈಲಾಸ

ಪತಿ ಶಂಕರನು ತನ್ನ ಪ್ರಿಯ ಸತಿಯೊಡನೆ ಆನಂದದಿಂದ ಮಾತಾಡುತ್ತ ಆ ಸಿಂಹಾಸನದ ಮೇಲೊಂದು ವ್ಯಾಘ್ರಚರ್ಮವನ್ನು ಹಾಸಿಕೊಂಡು ಕುಳಿತಿದ್ದನು. ಆತನ ಬಲಭಾಗದಲ್ಲಿ ದಾಕ್ಷಾಯಿಣಿಯು ಹೆಗಲ ಮೇಲೆ ಕೈಯಿಟ್ಟು ಕುಳಿತಿದ್ದಳು. ಆ ದೇವದಾರು ವೃಕ್ಷಕ್ಕೆ ಒಂದು ವನಲತೆಯು ಹಬ್ಬಿಕೊಂಡಿತ್ತು; ಎಡಬಲಗಳಲ್ಲಿ ಚಿಕ್ಕ ದೊಡ್ಡ ಗಿಡಗಳಿದ್ದವು. ಅದರಲ್ಲಿ ತರತರದ ಬಣ್ಣದಿಂದೊಪ್ಪುವ ಹೂಗಳ ಗೊಂಚಲುಗಳು ತುಂಬಿದ್ದವು; ಎಲೆಯೇ ಕಾಣಿಸದು; ಬರೇ ಹೂವು. ಕೆಳಗೆ ಕುಳಿತ ದೇವದಂಪತಿಗಳ ಮೇಲೆ ಆ ಹೂಗಳು ಗಾಳಿಯಿಂದ ಒಂದೊಂದಾಗಿ ಉದುರುವವು. ಇದನ್ನು ನೋಡಿದರೆ ಸೃಷ್ಟಿದೇವತೆಯು ಪ್ರೇಮದಿಂದ ಆ ದೇವ ದಂಪತಿಗಳನ್ನು ಪೂಜಿಸುವಳೋ ಎಂಬಂತೆ ತೋರುವದು. ಈ ಸಂಧ್ಯಾಕಾಲದ ಮನೋಹರವಾದ ಪ್ರಕಾಶದಲ್ಲಿ ಶಿವನ ಶುಭ್ರಮೂರುತಿಯು ಬಲು ಒಪ್ಪುತ್ತಿತ್ತು. ಜಗತ್ತಿನ ಕಲ್ಯಾಣಕರನಾದ ಶಿವನು ಆ ಸಮಯದಲ್ಲಿ ತನ್ನ ಪ್ರಿಯ ಪತ್ನಿಯಾದ ದಾಕ್ಷಾಯಿಣಿಯೊಂದಿಗೆ ಜೀವರಾಶಿಯ ಸುಖದುಃಖಗಳ ವಿಚಾರವನ್ನು ಮಾಡು ತ್ತಿದ್ದನು. ಅಷ್ಟರಲ್ಲಿ ಸೂರ್ಯನು ಅಸ್ತಂಗತನಾದನು. ಆಗ ಪರಮೇಶ್ವರನು ಅತ್ತ ಬೆರಳುಮಾಡಿ ತೋರಿಸಿ:—

**ಪರಮೇಶ್ವರ:**—ಸತೀ! ನೋಡಿದೆಯಾ? ಜಗತ್ತಿನ ನೇತ್ರಸ್ವರೂಪಿ ಯಾದ ಸೂರ್ಯದೇವನು ತನ್ನ ಉಜ್ವಲಕಿರಣಗಳಿಂದ ಇದುವರೆಗೆ ಜಗತ್ತನ್ನು ಪ್ರಕಾಶಿಸುತ್ತಿದ್ದನು. ಈಗಲಾ ದಿನಮಣಿಯ ತೇಜವು ಅಡಗಿಹೋಯಿತು. ನೋಡುನೋಡುತ್ತ ಆವನು ತೇಜೋಹೀನನಾಗಿ ಅದೃಶ್ಯನಾದನು. ಪೃಥ್ವಿಯಲ್ಲಿ ಯ ಮಾನವರ ಸ್ಥಿತಿಯೂ ಇದೇ ಪ್ರಕಾರವಿರುವದು. ಈ ದಿನ ಯಾವನು ಅಧಿ ಕಾರ-ಜ್ಞಾನ-ಗೌರವಗಳಿಂದ ಪ್ರಕಾಶಿಸುತ್ತಿರುವನೋ ಅವನು ನಾಳೆ ದಾರಿದ್ರ್ಯಾದಿ ತಾಪಗಳಿಂದ ಆವೃತನಾಗಿ ಅದೃಶ್ಯನಾಗಿಹೋಗುವನು. ಆದರೆ ಮೂಢ ಮಾನ ವನ ಭ್ರಾಂತಿಯೆಷ್ಟು ನೋಡಿದೆಯಾ? ಈ ನಶ್ವರವಾದ ತನ್ನ ದೇಹವೂ ತನ್ನ ಸಿರಿಸಂಪತ್ತುಗಳೂ ಸ್ಥಿರವೆಂದು ನಂಬಿ ಹೆಮ್ಮಿನಿಂದ ಧರ್ಮವನ್ನು ಮರೆಯುವನು; ಸತ್ಕಾರ್ಯಗಳನ್ನು ದುರ್ಲಕ್ಷಿಸುವನು; ಪರೋಪಕಾರವೇ ಪರಮಪದದಾಯಕ ವಾದ ಶ್ರೇಷ್ಠಧರ್ಮಕಾರ್ಯವೆಂಬದು ಅವನ ಸ್ಮರಣೆಗೂ ಬರದು.

**ಸತಿ:**—ಜಗತ್ಪಿತನೇ, ಸೂರ್ಯನು ಈಗ ಅಸ್ತಂಗತನಾದರೆ ನಾಳೆ ಪುನಃ ಉದಯಹೊಂದುವನು. ಈ ವಿಷಯದಲ್ಲಿ ಮಾನವನ ಸ್ಥಿತಿಯೆಂತು?

**ಪರಮೇಶ್ವರ**:—ದೇವೀ, ಸಾಮಾನ್ಯ ಜನರು ಯಾವವು ಜನನಮರಣಗಳೆಂದು ಭಾವಿಸುವರೋ ಅವನ್ನೇ ಜ್ಞಾನಿಗಳು ಉದಯಾಸ್ತಗಳೆಂದು ಹೇಳುವರು. ಆದರೆ ಈ ವಿಷಯದಲ್ಲಿ ಒಂದು ಚಿಕ್ಕ ತಾರತಮ್ಯವಿದೆ. ಸೂರ್ಯನಿಗೆ ಪುನಃ ಪುನಃ ಉದಯಾಸ್ತಗಳಾದರೂ ಅವನ ತೇಜಸ್ಸಿನಲ್ಲಿ ಹೆಚ್ಚು ಕಡಿಮೆಯಾದಂತೆ ಕಂಡುಬರುವದಿಲ್ಲ; ಮನುಷ್ಯಪ್ರಾಣಿಯ ಸ್ಥಿತಿಯು ಮಾತ್ರ ಹೀಗಿಲ್ಲ. ಅವನು ತನ್ನ ಕರ್ಮಾನುಗುಣವಾಗಿ ಹೆಚ್ಚು ತೇಜಃಶಾಲಿಯಾಗಿಯಾಗಲಿ, ತನ್ನ ಇದ್ದ ತೇಜಸ್ಸನ್ನು ಕಳೆದುಕೊಂಡಾಗಲಿ ಪುನಃ ಉದಯನಾಗುವನು. ಮನುಷ್ಯನು ತನ್ನ ಪ್ರತಿಯೊಂದು ಜನ್ಮದಲ್ಲಿ ಹೆಚ್ಚು ಹೆಚ್ಚು ಜ್ಞಾನಸಂಗ್ರಹ ಮಾಡಿಕೊಂಡಂತೆಯೂ ಹೆಚ್ಚು ಸುಶೀಲನೂ ಸದಾಚಾರಿಯೂ ಆದಂತೆಯೂ ಮುಂದಿನ ಜನ್ಮದಲ್ಲಿ ಹೆಚ್ಚು ತೇಜಸ್ವಿಯಾಗಿ ಹುಟ್ಟುವನು ಜ್ಞಾನ-ಧರ್ಮಗಳನ್ನು ಬಿಟ್ಟು ನಡೆಯುವವನು ಅವನತಿಯನ್ನು ಹೊಂದುವನು.

**ಸತಿ**:—ಇರಲಿ, ಪ್ರಭುವೇ, ನೀವೆನ್ನುವ ವಿಚಾರವನ್ನು ಕೇಳಿದರೆ ಮನುಷ್ಯನ ಆತ್ಮವು ಅಜರಾಮರವಾಗಿರುವದೆಂದಂತಾಗುತ್ತದೆ. ಹಾಗೂ ತನ್ನ ಕರ್ಮಾನುಗುಣಗಳಾದ ಫಲಗಳನ್ನು ಅನುಭವಿಸುವದಕ್ಕಾಗಿ ತೇಜಸ್ವಿಯಾದ ಇಲ್ಲವೆ ಅವನತಸ್ಥಿತಿಯ ದೇಹವನ್ನು ಧರಿಸಿ ಈ ಪ್ರಪಂಚವೆಂಬ ನಾಟಕಶಾಲೆಯಲ್ಲಿ ಬಂದು ನಾಟ್ಯವಾಡಿ ಮರೆಯಾಗುವದು; ಪುನಃ ಹೊರಗೆ ಬರುವದು, ಎಂದಂತಾಯಿತು. ಒಳ್ಳೇದು. ಸತಿಯರಿಗೆ ಪಾತಿವ್ರತ್ಯವೇ ಪರಮಭೂಷಣವೆಂದು ಹೇಳಿರುವರಷ್ಟೇ; ಅಂಥ ಪತಿವ್ರತಾಸ್ತ್ರೀಯ ನಡತೆಯು ಎಂತಿರಬೇಕು?

**ಪರಮೇಶ್ವರ**:—ದೇವೀ, ಸತಿಗೆ ಪತಿಯಿಂದ ಬೇರೆಯಾದ ದೇವರಿಲ್ಲ. ಪತಿಸೇವೆಯುಲ್ಲದೆ ಬೇರೆ ವ್ರತೋಪವಾಸಗಳಿಲ್ಲ. ಪತಿಯು ಮನಸ್ಸಿನ ಸಮಾಧಾನವನ್ನು ಕಾಯ್ದುಕೊಳ್ಳುವದಲ್ಲದೆ ಬೇರೆ ಅನುಷ್ಠಾನವಿಲ್ಲ. ಆತನ ಮನಸ್ಸಿಗೆ ಬಾರದ ನುಡಿಗಳನ್ನು ಅವಳು ಎಂದೆಂದೂ ಆಡಲಾಗದು. ಅವನಿಗೆ ಸೇರದ ಸಂಗತಿಯನ್ನು ಎಂದೂ ಮನಸಿನಲ್ಲಿ ತರಬಾರದು. ಅವನಿಗೆ ಎಲ್ಲ ಕಾರ್ಯಗಳಲ್ಲಿ ನೆರವಾಗಬೇಕು. ಸತಿಪತಿಗಳು ಈ ಪ್ರಪಂಚದಲ್ಲಿ ರಥಕ್ಕಿರುವ ಎರಡು ಗಾಲಿಗಳಂತಿರುವರು. ಅಥವಾ ಮನುಷ್ಯನ ಮುಖದ ಮೇಲಿನ ಎರಡು ಕಣ್ಣುಗಳಂತಿರುವರು. ರಥದ ಒಂದು ಗಾಲಿಯು ತಿರುಗಿದರೆ ಇನ್ನೊಂದು ಗಾಲಿಯೂ ತಿರುಗ

ಲೇಬೇಕಾಗುವದು. ಅದರಂತೆ ಒಂದು ಕಣ್ಣು ಒಂದು ಪದಾರ್ಥವನ್ನು ಒಂದು ಭಾವನೆಯಿಂದ ನೋಡುತ್ತಿದ್ದರೆ ಮತ್ತೊಂದು ಕಣ್ಣು ಆ ಪದಾರ್ಥವನ್ನು ಬೇರೊಂದು ಭಾವನೆಯಿಂದ ಎಂದೂ ಲೋಡಲಾರದು. ಬಹಳ ಹೇಳುವದರಲ್ಲಿ ಅರ್ಥವಿಲ್ಲ. ಸತಿಗೆ ಪತಿಯಲ್ಲಿ ಅನನ್ಯವಾದ ಅನುರಾಗವಿರಬೇಕು. ಆ ಅನುರಾಗವೇ ಪತಿಯು ಕಣ್ಣೆದುರಿನಲ್ಲಿರುವಾಗ ಪ್ರೇಮರೂಪವಾಗಿಯೂ ಕಣ್ಮರೆಯಾಗಿರುವಾಗ ಭಕ್ತಿರೂಪವಾಗಿಯೂ ಪರಿಣಮಿಸಬೇಕು. ಅಂದರೆ ಸಾಮಾನ್ಯ ಮಾನವಸ್ತ್ರೀಯರೂ ನಿನ್ನ ಸಮಾನ ಯೋಗ್ಯತೆಯುವರೆನ್ನಿಸಿಕೊಳ್ಳುವರು. ಬಲ್ಲೆಯಾ? ಸತಿಯು ಈ ರೀತಿಯಾಗಿ ಸನ್ಮಾರ್ಗದಿಂದ ನಡೆದ ಮಾತ್ರದಿಂದಲೇ ಅವರ ಸಂಸಾರವು ಸುಖಕರವಾಗಲಾರದು. ಸತಿಯುಂತೆಯೇ ಪತಿಯೂ ತನ್ನ ಪ್ರೇಮದ ಪತ್ನಿಯಲ್ಲಿ ಅನನ್ಯಭಾವದಿಂದ ನಡೆದುಕೊಳ್ಳಬೇಕು, ಹೀಗಾದರೆ ಮಾತ್ರ ಅವರ ಸಂಸಾರವು ನಿಜವಾದ ಸುಖದ ಆಗರವಾಗುವದು.

**ಸತಿ**:—ಜಗತ್ಪಿತನೇ, ಸುಖದುಃಖಗಳ ವಿಚಾರವಾಯಿತು; ಜನನಮರಣಗಳ ವಿಚಾರವಾಯಿತು; ಪತಿವ್ರತಾಧರ್ಮದ ವಿಚಾರವಾಯಿತು. ಇನ್ನು ಜನರು ಧರ್ಮ, ಧರ್ಮ, ಎನ್ನುತ್ತಿರುವರು. ಆ ಸರ್ವಸಾಮಾನ್ಯವಾದ ಧರ್ಮದ ಸಾರರೂಪವಾದ ಒಂದು ಮಾತನ್ನು ಹೇಳಬಲ್ಲಿರಾ?

**ಪರಮೇಶ್ವರ**:—ಸತೀ, ಸಾವಿರಮಾತಿನಿಂದ ಫಲವೇನು?

आहारनिद्राभयमैथुनं च, सामान्यमेतत् पशुभिर्नराणाम् ॥
धर्मोहि तेषामधिको विशेषो, धर्मेण हीनाः पशुभिः समानाः ॥

ಎಂದರೆ ಆಹಾರ, ನಿದ್ರೆ, ಭಯ, ಮೈಥುನ ಇವು ಪಶುಗಳಿಗೆ ಇರುವಂತೆಯೇ ಮನುಷ್ಯನಿಗೂ ಇರುವವು. ಆದರೆ ಧರ್ಮವೊಂದು ಮನುಷ್ಯನಿಗೆ ಹೆಚ್ಚಿನದಾಗಿದೆ. ಆ ಧರ್ಮವನ್ನು ಬಿಟ್ಟನೆಂದರೆ ಮನುಷ್ಯನು ಪಶುಗಳಂತೆಯೇ ಆಗುವನು. ಧರ್ಮದ ರಹಸ್ಯವನ್ನು ಒಂದೇಮಾತಿನಲ್ಲಿ ಹೇಳುವದೆಂದರೆ ಹೀಗೆ ಹೇಳಬೇಕಾಗುವದು:—“ **ಪರೋಪಕಾರಃ ಪುಣ್ಯಾಯ, ಪಾಪಾಯ ಪರಪೀಡನಂ** ” ಪರೋಪಕಾರಕ್ಕೆ ಭೂತದಯೆಯು ಎಂದರೆ ಸಕಲ ಪ್ರಾಣಿಗಳನ್ನೂ ತನ್ನಂತೆಯೇ ಭಾವಿಸುವದು, ಇದೇ ಮೂಲಾಧಾರವು. ಇದನ್ನು ಸದಾ ನೆನಪಿನಲ್ಲಿಟ್ಟುಕೊಂಡು ನಡೆಯಬೇಕು.



"....ಪತಿಯ ಅರ್ಧಾಸನದಲ್ಲಿ ಕುಳಿತಿದ್ದ ಸತಿಯು.....ಕೆಳಗಿಳಿದು ಕುಳಿತಳು."

ಇಂತು ಆ ದೇವದಂಪತಿಗಳು ಜಗತ್ಕಲ್ಯಾಣಕರವಾದ ಸಂಭಾಷಣೆಯಲ್ಲಿ ನಿಮಗ್ನರಾಗಿರುವಾಗ ದೂರದಲ್ಲಿ ನಾರದಮುನಿಗಳ ವೀಣಾನಾದದೊಂದಿಗೆ ಹರಿ ನಾಮಸ್ಮರಣೆಯು ಕೇಳಿಸಹತ್ತಿತು.

ನಾರದರು ಬಂದು ಜಗತ್ಕಲ್ಯಾಣಕರನಾದ ಶಂಕರನ ಪಾದಗಳಿಗೆ ವಂದಿಸಿದರು. ಶಂಕರನು ನಾರದರನ್ನು ಎತ್ತಿ ಉಚಿತಾಸನದಲ್ಲಿ ಕುಳ್ಳಿರಲು ಹೇಳಿದನು. ಇಷ್ಟು ಹೊತ್ತಿನವರೆಗೆ ಪತಿಯ ಅರ್ಧಾಸನದಲ್ಲಿ ಕುಳಿತಿದ್ದ ಸತಿಯು ಚಿಕ್ಕಪ್ಪನು ಬಂದೊಡನೆಯೇ ನಾಚಿಕೊಂಡು ಕೆಳಗಿಳಿದು ಕುಳಿತಳು. ಮದುವೆಯಾದಬಳಿಕ ತಮ್ಮವರಾಗಿ ಕೈಲಾಸಗಿರಿಗೆ, ಸತಿಯು ಪತಿಗೃಹಕ್ಕೆ ಬಂದವರೆಂದರೆ ನಾರದರೊಬ್ಬರೇ; ಅದೂ ಇಂದೇ ಬಂದಿದ್ದರು. ಸತಿಗೂ ಜಗತ್ಪಿತನಾದ ಕೈಲಾಸಪತಿಯು ಸಹವಾಸದಲ್ಲಿರುವಾಗ ತಾಯಿಯ ಮನೆಯ ನೆನಪೇ ಆಗಿರಲಿಲ್ಲ. ಒಮ್ಮೊಮ್ಮೆ ನೆನಪಾದರೂ ಅದನ್ನು ಮರೆತುಬಿಡುವಳು. ಯಾಕಂದರೆ, ಪತಿಗೃಹದಲ್ಲಿರುವ ಸತಿಯು ತವರ್ಮನೆಯ ಸುಖಸಂಪದಗಳನ್ನು ಸ್ಮರಿಸಿಕೊಂಡು ಕಾರಣಾಂತರದಿಂದಲೂ ದುಃಖವನ್ನು ತಳೆಯುಕೂಡದೆಂಬ ಸತೀ ಧರ್ಮವು ಅವಳ ಅಂತರಂಗದಲ್ಲಿ ಸದಾ ವಾಸವಾಗಿತ್ತು. ಇಂದು ಚಿಕ್ಕಪ್ಪನು ಅಕಸ್ಮಾತ್ತಾಗಿ ಬಂದದ್ದನ್ನು ನೋಡಿ ಅವಳಿಗೆ ತವರ್ಮನೆಯ ನೆನಪಾಯಿತು. ಅವಳು ತಾಯಿಯ, ತಂದೆಯ, ಬಂಧುಭಗಿನಿಯರ, ತವರ್ಮನೆಯ ದಾಸದಾಸಿಯರ, ತನ್ನ ಪ್ರೀತಿಯ ಶಿವಮಂದಿರದ, ಬಿಲ್ವವೃಕ್ಷದ, ನೀಲಧಾರೆಯ, ಅಲ್ಲಿಯ ಮಳಲಿರಾಶಿಯ ವೃತ್ತಾಂತಗಳನ್ನೆಲ್ಲಾ ಕೇಳಿದಳು. ನಾರದರು ಎಲ್ಲರ ಸುಖಸಮೃದ್ಧಿಗಳನ್ನು ಉಸುರಿದರು. ಸತಿಗೆ ಪರಮಾನಂದವಾಯಿತು. ಅವಳು ಮತ್ತೇನು ಸಮಾಚಾರವೆಂದಳು. ನಾರದರು ನಗುತ್ತ ಮಗೂ ಹೇಳುವದೇನು? ನಿಮ್ಮ ತಂದೆಯು ಒಂದು ಮಹಾ ಯಜ್ಞವನ್ನು ಹಮ್ಮಿರುವನು. ಆ ಯಜ್ಞದ ಆಮಂತ್ರಣವನ್ನು ಕೊಡುವದಕ್ಕಾಗಿ ನಾನು ಹದಿನಾಲ್ಕು ಲೋಕಗಳಲ್ಲಿಯೂ ತಿರುತಿರುಗಿ ದಣಿದೆನು. ಎಂದರು. ತವರ್ಮನೆಯಲ್ಲಿ ಯಜ್ಞಸಮಾರಂಭವೆಂಬದನ್ನು ಕೇಳಿ ಸತಿಗೆ ಆದ ಆನಂದಕ್ಕೆ ಪಾರವಿಲ್ಲ. ಅವಳು ನಾರದರು ತನ್ನನ್ನು ಕರೆದುಕೊಂಡು ಹೋಗಲು ಬಂದಿರುವರೆಂದು ತಿಳಿದುಕೊಂಡು “ ನನ್ನನ್ನು ಕರೆದುಕೊಂಡು ಹೋಗಲು ಬಂದಿರುವಿರಾ? ನಾನು ಎಲ್ಲವನ್ನೂ ಅಣಿಮಾಡಿಕೊಳ್ಳುತ್ತೇನೆ. ನಾಳೆಯೇ ಹೊರಡೋಣ. ” ಎಂದಳು.

ನಾರದರಿಗೆ ಬಲು ಪೇಚಾಟವಾಯಿತು. ಕೈಲಾಸಪುರಿಗೆ ಆಮಂತ್ರಣವನ್ನು ಹೇಳಕೂಡದೆಂದು ದಕ್ಷನ ಕಟ್ಟಪ್ಪಣೆಯಾಗಿತ್ತು. ಸತಿಯಾದರೊ ತನ್ನನ್ನು ಕೇಳದೆಯೇ ಬೆನ್ನುಹತ್ತಲು ಸಿದ್ಧಳಾದಳು. ಕರೆದುಕೊಂಡು ಹೋಗೋಣವೇ ಹಾಗೆಂದು ಬಿಟ್ಟು ಹೋಗೋಣವೇ? ಎರಡೂ ಆಗದ ಮಾತು. ಈ ರೀತಿಯಾಗಿ ನಾರದರು ವಿಚಾರಮಾಡುತ್ತಿರಲು ಅವರ ಮುಖದಲ್ಲಿ ಚಿಂತೆಯ ಛಾಯೆಯು ಒಡೆದು ಕಾಣಿಸಿತು. ಅವರು ದುಃಖದಿಂದ ತಪ್ಪುತ್ತ ತಡೆಯುತ್ತ, “ ಇಲ್ಲವಮ್ಮಾ ನಿನ್ನನ್ನು ಕರೆದುಕೊಂಡು ಹೋಗಲು ನಾನು ಬಂದಿಲ್ಲ.” ಎಂದರು. ಈ ಎಲ್ಲ ಸ್ಥಿತಿಯನ್ನು ನೋಡುತ್ತ ಸಮೀಪದಲ್ಲಿದ್ದ ನಂದಿಯು—“ ಸ್ವಾಮೀ, ಹೀಗೆಂದರೇನು? ತಾವು ಬರೇ ಆಮಂತ್ರಣವನ್ನು ಕೊಡಲು ಬಂದಿರುವಿರೇ? ಹಾಗಿದ್ದರೆ ನಾನೇ ಅಮ್ಮನವರ ಸಂಗಡ ಬರುವೆನು. ” ಎಂದನು.

ನಾರದರು ತುಸು ಗಟ್ಟಿಮನಸ್ಸುಮಾಡಿ “ ಇಲ್ಲ, ಅದಕ್ಕಾಗಿ ಅಲ್ಲ. ” ಎನ್ನುತ್ತ ಮುಖವನ್ನು ತಗ್ಗಿಸಿಕೊಂಡು ಕುಳಿತರು. ನಾರದರ ಸ್ಥಿತಿಯನ್ನು ನೋಡಿ ಎಲ್ಲರಿಗೂ ಸಂಶಯವುಂಟಾಯಿತು.

**ಪರಮೇಶ್ವರನು:**—“ ನಾರದರೇ ಆದದ್ದಾದರೂ ಏನು? ಏಕೆ ಸ್ಪಷ್ಟವಾಗಿ ಹೇಳುವದಿಲ್ಲ? ” ಎಂದನು.

**ನಾರದರು:**—“ವಿಶೇಷವೇನೂ ಇಲ್ಲ. ಗರ್ವಾಂಧನಾದ ದಕ್ಷನು ಶಿವಹೀನ ಯಜ್ಞವನ್ನು ಮಾಡಬೇಕೆಂದು ನಿಶ್ಚಯಿಸಿರುವನು. ಶಿವಹೀನಯಜ್ಞದ ಫಲವಾದರೂ ಶಿವ ( ಕಲ್ಯಾಣ ) ಹೀನವಾದದ್ದೇ ಆಗುವದರಲ್ಲಿ ಸಂದೇಹವಿಲ್ಲ. ಅವನು ಹದಿನಾಲ್ಕುಲೋಕದ ಜನರಿಗೂ ಆಮಂತ್ರಣವನ್ನು ಕಳುಹಿಸಿರುವನಾದರೂ ಕೈಲಾಸಪುರಿಗೆ ನಿಮಂತ್ರಣವನ್ನು ಕೊಡಕೂಡದೆಂದು ಖಂಡಿತವಾಗಿ ಆಜ್ಞಾಪಿಸಿರುವನು. ಆಮಂತ್ರಣಕೊಡುವ ಭಾರವನ್ನು ನಾನು ವಹಿಸಿಕೊಂಡಿದ್ದೆನು. ಆದ್ದರಿಂದ ಈ ಸಂಗತಿಯನ್ನು ತಮಗೆ ತಿಳಿಸಿ ಕ್ಷಮೆಯನ್ನು ಬೇಡಿಕೊಳ್ಳಬೇಕೆಂದು ಬಂದಿದ್ದೇನೆ. ” ಹೀಗೆಂದು ಶಂಕರನ ಪಾದಗಳಿಗೆ ಎರಗಿದರು.

ಪರಮೇಶ್ವರನಿಗೆ ಹಿಡಿಸಲಾರದಷ್ಟು ನಗೆ ಬಂದಿತು. ಆತನು “ ಓ! ಇಷ್ಟೇ ಅಲ್ಲವೇ, ಆತನ ಯಜ್ಞಸಮಾರಂಭವು ಯಾರಿಗೆ ಬೇಕಾಗಿದೆ? ಎಲ್ಲವೂ ಆನಂದದಿಂದ ನಡೆಯಲಿ. ” ಎಂದನು.

ಸತಿಗೆ ಮಾತ್ರ ಈ ಮಾತಿನಿಂದ ಬಹು ದುಃಖವಾಯಿತು. ಅವಳು ಅಳುತ್ತ “ಅಹಹಾ! ಎಂಥ ದುರ್ಬುದ್ಧಿಯಿದು? ಶಿವಹೀನಯಜ್ಞವು ಎಂದಾದರೂ ಮಂಗಳಕರವಾಗಬಹುದೇ? ವಿನಾಶಕಾಲಕ್ಕೇ ಇಂಥ ವಿಪರೀತಬುದ್ಧಿಯು ಹುಟ್ಟಿತು. ದಾದಾ, ಮುಂದೇನು ಗತಿ?” ಎಂದಳು.

**ನಾರದ**:—ಮಗೂ, ನೀನರಿಯದಿರುವದು ಒಂದೂ ಇಲ್ಲ. ಸರ್ವಮಂಗಳೆಯು ಯಾವಾತನ ಮಗಳೋ ಸರ್ವಮಂಗಲಮಯನಾದ ಶಂಕರನು ಯಾವಾತನ ಅಳಿಯನೋ ಅವನಿಗೆ ಅಮಂಗಲದ ಭಯವೇತರದು? ನಿನ್ನ ಮನಬಂದ ಹಾಗೆ ನಡೆದುಕೊಳ್ಳಬಹುದು. ಹೀಗೆಂದು ನಾರದರು ಹೊರಟುಹೋದರು. ಸತಿಗೆ ಉಭಯಸಂಕಟವು ಪ್ರಾಪ್ತವಾಯಿತು ಒಂದುಕಡೆಗೆ ಪರಮಪೂಜ್ಯ—ಸದಾ ಆರಾಧ್ಯ—ಪತಿದೇವನ ಅಪಮಾನ; ಅವನಿಗೆ ಯಜ್ಞದಲ್ಲಿ ಸಲ್ಲತಕ್ಕ ಹವಿರ್ಭಾಗವಿಲ್ಲ; ಆತನು ದೇವಗಣದಿಂದ ಬಹಿಷ್ಕೃತನಾಗುವನು. ಮತ್ತೊಂದು ಕಡೆಗೆ ಹಡೆದ ತಂದೆ, ಪಿತೃದೇವನ ಅಮಂಗಲದ ಸೂಚನೆಯಾಯಿತು. ಅಭಿಮಾನಾಂಧನಾದ ತಂದೆಯು ಆ ಮಂಗಲಮಯನಾದ ಮಂಗಲಾಧಾರನಾದ ಮಹಾದೇವನನ್ನು ಬಿಟ್ಟು ಯಜ್ಞಮಾಡಲು ತೊಡಗಿರುವನು! ಏನುಮಾಡಬೇಕು? ಹೇಗೆ ಮಾಡಬೇಕು? ಎಂಬದೇ ಸತಿಗೆ ತೋಚದು.

---

## ಒಂಬತ್ತನೆಯ ಪರಿಚ್ಛೇದ.



## ಪಿತೃಗೃಹಗಮನ.




ದ್ಯಶಕ್ತಿ, ಜಗಜ್ಜನನೀ, ಸತೀಶಿರೋಮಣಿಯಾದ ದಾಕ್ಷಾಯಿಣಿಯ ತಂದೆ ದಕ್ಷಬ್ರಹ್ಮನ ಮನೆಯಲ್ಲಿ ಮಹಾಯಜ್ಞಸಮಾರಂಭ. ದಾಂಭಿಕನಾದ ದಕ್ಷರಾಜನು ಕೇವಲ ದಂಭದಲ್ಲಿಯೇ ಮುಳುಗಿದ್ದನು. ದಂಭದ ಹೊರತು ಎರಡನೇ ಸ್ನೇಹ, ಪ್ರೇಮ, ಕೋಮಲತೆ, ಔದಾರ್ಯ ಮುಂ

ತಾದ ಸದ್ಗುಣಗಳಿಗೆ ಅವನ ಅಂತರಂಗದಲ್ಲಿ ಅವಕಾಶವೇ ಇರಲಿಲ್ಲ. ಕೇವಲ ದಂಭವನ್ನೇ ಅವಲಂಬಿಸಿಕೊಂಡು ಅವನು ಸಕಲ ಮಂಗಲಮಯನಾದ ಶಂಕರನ ಸೇಡುತೀರಿಸಿಕೊಳ್ಳುವದಕ್ಕಾಗಿ ಪ್ರಯತ್ನವನ್ನು ಆರಂಭಿಸಿದ್ದನು. ಈ ದಂಭದ ಮೂಲಕವಾಗಿಯೇ ಅವನ ವಿದ್ಯೆ, ಬುದ್ಧಿ, ವಿವೇಕ ಇವೆಲ್ಲಾ ಮುಸುಳಿಸಿ ಹೋಗಿದ್ದವು. ಈ ದಂಭವೇ ಅವನ ಸರ್ವನಾಶಕ್ಕೆ ಕಾರಣವಾಯಿತು.

ಈ ಪ್ರಪಂಚವು ಕಾರ್ಯಕಾರಣ ಸೂತ್ರದಿಂದ ಸದಾ ಬದ್ಧವಾಗಿರುವದು. ಈ ಸೂತ್ರವನ್ನು ಮೀರಿ ನಡೆಯಲು ಯಾರಿಗೂ ಸಾಧ್ಯವಿಲ್ಲ. ಆದ್ಯಶಕ್ತಿ ಮಹಾಮಾಯೆಯೇ ಈ ಕಾರ್ಯ-ಕಾರಣ-ಸೂತ್ರಕ್ಕೆ ಆಶ್ರಯಳು. ಆ ಶಕ್ತಿಯ ಯೋಗದಿಂದಲೇ ಪ್ರಪಂಚದ ಸೃಷ್ಟಿ-ಸ್ಥಿತಿ-ಲಯಗಳು ಸಂಭವಿಸುವವು. ಕೈಲಾಸ ಗಿರಿಯಲ್ಲಿ ಶ್ರೀಶಂಕರನ ಸನ್ನಿಧಿಯಲ್ಲಿ ಕುಳಿತುಕೊಂಡು ಆದ್ಯಶಕ್ತಿಯ ಅವತಾರವಾದ ದಾಕ್ಷಾಯಿಣಿಯು ನಾರದರ ಮುಖದಿಂದ ತಂದೆಯ ದುರಭಿಮಾನ ಮೂಲಕವಾದ ಶಿವಹೀನಯಜ್ಞದ ಸಿದ್ಧತೆಯ ವಿಚಾರವನ್ನು ಕೇಳಿ ತಾನು ಯಾವದಾದರೂ ರೀತಿಯಿಂದ ತಂದೆಯ ಮನೆಗೆ ಹೋಗಲೇಬೇಕೆಂದು ನಿರ್ಣಯಿಸಿಕೊಂಡಳು. ಆ ಮಹಾಮಾಯೆಯು ಈ ಮಾರ್ಗದಿಂದ ತನ್ನ ಯಾವ ತರದ ಕೃತಿಯನ್ನು ಜಗತ್ತಿಗೆ ತೋರಿಸಬೇಕೆಂದು ನಿರ್ಣಯಿಸಿಕೊಂಡಿದ್ದಳೋ ಯಾರು ಬಲ್ಲರು?

ಈ ರೀತಿಯಾಗಿ ವಿಚಾರಮಾಡಿಕೊಂಡ ಬಳಿಕ ಸತೀದೇವಿಯು ಪತಿದೇವನ ಬಳಿಗೆ ಬಂದು:—ಸ್ವಾಮೀ, ನನ್ನದೊಂದು ವಿಜ್ಞಾಪನೆಯಿರುವದು. ತಮ್ಮ ಅಪ್ಪಣೆಯಾದರೆ ನಾನು ಒಮ್ಮೆ ದಕ್ಷಪುರಿಗೆ ಹೋಗಿಬರುವೆನು. ತಂದೆಯ ದುರಭಿಪ್ರಾಯವನ್ನು ದೂರಮಾಡಿ ಆತನಿಗೆ ಸನ್ಮಾರ್ಗವನ್ನು ತೋರಿಸುವದು ನನ್ನ ಕರ್ತವ್ಯವು.

**ಪರಮೇಶ್ವರ:**—ದೇವೀ, ಈ ಸಮಯವನ್ನು ಬಿಟ್ಟು ಮತ್ತೊಂದು ವೇಳೆಯಲ್ಲಿ ಹೋಗುವದು ಉತ್ತಮ. ಈಗ ಸಿಟ್ಟಿನ ಭರದಲ್ಲಿ ಅವನು ನಿನಗೂ ಅಪಮಾನಮಾಡಬಹುದು.

**ಸತಿ:**—ನನಗೆ ಅಪಮಾನ ಮಾಡುವನೇ; ಅವನಲ್ಲಿ ನಾನೇನು ಅಪರಾಧ ಮಾಡಿದ್ದೇನೆ?

**ಪರಮೇಶ್ವರ:**—ಸತೀ, ನೀನು ಬಹಳ ಸರಳ ಸ್ವಭಾವದವಳು. ದಕ್ಷನ ಕಪಟವನ್ನು ನೀನರಿಯೆ. ದುರಭಿಮಾನದಿಂದ ಅಂಧನಾದ ಅವನು ಯೋಗ್ಯಾಯೋಗ್ಯ ವಿಚಾರಮಾಡಲಾರನು. ಅದರಿಂದ ನಾವು ಅಲ್ಲಿಗೆ ಹೋಗದಿರುವದೇ ಉತ್ತಮ. ನಾವೇ ಇಲ್ಲದ ಮೇಲೆ ಅವನು ಯಾರಿಗೆ ಅಪಮಾನ ಮಾಡುವನು? ನಮ್ಮನ್ನು ಅಪಮಾನಪಡಿಸಲೆಂದೇ ಈ ಮಹಾಯಜ್ಞವನ್ನು ಹಮ್ಮಿರುವನು. ಇಂಥ ಪ್ರಸಂಗದಲ್ಲಿ ನಾವು ಆದರಪೂರ್ವಕ ನಿಮಂತ್ರಣವಿಲ್ಲದೆ ಅವನ ಬಾಗಿಲಿಗೆ ಹೋಗಬಹುದೇ? ನೀನೇ ನೋಡು.

ಶಂಕರನು ಉಪಾಯಾಂತರದಿಂದ ದಾಕ್ಷಾಯಿಣಿಯ ಅಂತರಂಗದ ಅಭಿಮಾನವನ್ನು ಜಾಗ್ರತಗೊಳಿಸಿದನು. ಹಾಗೆ ಮಾಡುವದರಿಂದಲಾದರೂ ಅವಳು ಅಲ್ಲಿಗೆ ಹೋಗುವ ವಿಚಾರವನ್ನು ಬಿಡುವಳೇನೋ ಎಂದು ಅವನು ಯೋಚಿಸಿದ್ದನು. ಆದರೆ ಸತಿಯು ತನ್ನ ಅಂತರಂಗದಲ್ಲಿ ಒಮ್ಮೆ ಸ್ಥಿರಮಾಡಿಕೊಂಡ ವಿಚಾರವನ್ನು ಬಿಡಲಾರದೆ ಮತ್ತೊಂದು ಸಮಾಧಾನವನ್ನು ಮುಂದೆ ಮಾಡಿದಳು.

**ಸತಿ:**—ಮಗಳಿಗೆ ತಂದೆಯ ಮನೆಗೆ ಹೋಗುವದಕ್ಕೆ ಆಮಂತ್ರಣವೇ ತಕ್ಕೆಬೇಕು? ಇದಲ್ಲದೆ ನಮ್ಮಮ್ಮನು ಅನ್ನನೀರುಗಳನ್ನು ಬಿಟ್ಟು ಬಿದ್ದಿರುವಳೆಂಬದನ್ನು ಕೇಳಿಯೂ ನಾನು ಇಲ್ಲಿ ಹೇಗೆ ಸುಮ್ಮನೆ ಉಳಿಯಲಿ? ಇಂಥ ಆಪತ್ತಿನಲ್ಲಿ ಅಪಮಾನಕ್ಕೆ ಅಂಜಿ ತಾಯಿಯ ದರ್ಶನಕ್ಕೆ ಹೋಗದಿರುವದು ಹೇಗೆ?

ಈ ರೀತಿಯಾಗಿ ಸತಿಯು ಯಾವ ಉಪಾಯಕ್ಕೂ ಒಳಗಾಗದೆ ತವರ್ಮನೆಗೆ ಹೋಗಲೇಬೇಕೆಂದು ಹಟತೊಟ್ಟಿರುವದನ್ನು ನೋಡಿ ಶಂಕರನು ವಿಶೇಷ ವಿಚಾರಮಾಡಬೇಕಾಯಿತು. ಅವನು ತನ್ನ ಜ್ಞಾನದೃಷ್ಟಿಯಿಂದ ವಿಚಾರಮಾಡಿದನು. ಏನೆಂದರೆ:—“ಈ ಕಾರ್ಯಕ್ಷೇತ್ರದಲ್ಲಿ ಆದ್ಯಶಕ್ತಿಯ ಇಚ್ಛಾನುಸಾರವಾಗಿಯೇ ಸಕಲವೂ ನಡೆಯಬೇಕಲ್ಲದೆ ಆ ಕಾರ್ಯಕಾರಣ ಸೂತ್ರದ ಹೊರಗೆ ಯಾವದೂ ಹೋಗಲಾರದು. ಆ ಇಚ್ಛಾಮಯಿಯಾದ ಆದ್ಯಶಕ್ತಿಯ ಇಚ್ಛೆಯಿಂದಲೇ ಸಮಸ್ತ ಶುಭಾಶುಭಗಳೂ ಸದಸತ್ ಸಂಗತಿಗಳೂ ಸಂಘಟಿಸುವವಲ್ಲದೆ ಬೇರೆಯಿಲ್ಲ. ಆದ್ದರಿಂದ ಅವಳ ಇಚ್ಛೆಯ ವಿರುದ್ಧವಾಗಿ ಹೋಗುವದು ಸರಿಯಲ್ಲ. ಸರಿ! ಇಂದೇ ನನ್ನ ಸತಿಯ ಕೊನೆಯ ದಿನ! ಇನ್ನಿವಳ ದರ್ಶನಾಪೇಕ್ಷೆಯಿಲ್ಲ. ಸತಿಯು ಮುಂದೆ ಆಗತಕ್ಕದ್ದನ್ನೆಲ್ಲಾ ತಿಳಿದುಕೊಂಡೇ ಈ ವಿಚಾರವನ್ನು ನನಗೆ ಹೇಳಿರುವಳು.”

ಈ ರೀತಿಯಾಗಿ ವಿಚಾರಮಾಡಿ ಶಂಕರನು ಸತಿಗೆ ತವರ್ಮನೆಗೆ ಹೋಗಲು ಅನುಮತಿಯನ್ನು ಕೊಟ್ಟನು.

ಪತಿದೇವನಿಂದ ಅಪ್ಪಣೆಯನ್ನು ಪಡೆದುಕೊಂಡ ದಾಕ್ಷಾಯಿಣಿಯು ಸಂಗಡ ನಂದಿಯನ್ನು ಕರೆದುಕೊಂಡು ದಕ್ಷಪುರಿಗೆ ಹೊರಟಳು. ದಾರಿಯಲ್ಲಿ ನಂದಿಯು:—ಅಮ್ಮಾ! ಐಶ್ವರ್ಯಪ್ರಿಯರಾದ ನಿಮ್ಮ ತವರ್ಮನೆಯವರು ನಿಮ್ಮ ಈ ತರದ ಯೋಗಿನಿಯ ವೇಷವನ್ನು ನೋಡಿ ದುಃಖಪಟ್ಟಾರು. ಅವರಿಗೆ ಕೈಲಾಸಪತಿ ಶ್ರೀಶಂಕರನ ವಿಷಯವಾಗಿ ಒಂದು ತರದ ಅನಾದರವೂ ಹುಟ್ಟದಿರದು. ಆದರಿಂದ ನೀವು ಕೈಲಾಸಗಿರಿಯಲ್ಲಿ ಶಿವನಪತ್ನಿಗೆ ಒಪ್ಪುವ ಯೋಗಿನಿಯ ವೇಷದಿಂದಲೇ ಇರುತ್ತಿದ್ದರೂ ದಕ್ಷಪುರಿಗೆ ತೆರಳುವಾಗ ದಾಕ್ಷಾಯಿಣಿಯ ವೇಷದಿಂದಲೇ ಹೋಗಬೇಕು. ವಿಲಾಸಪ್ರಿಯರಾದ ಅವರ ಮುಂದೆ ಹೋಗುವಾಗ ವಿಲಾಸದ ಒಡವೆಗಳನ್ನು ಧರಿಸಿಕೊಂಡು ಹೋಗುವದು ಒಳ್ಳೆಯದು. ಈ ತರದ ವಸ್ತ್ರಾಲಂಕಾರಗಳಿಂದ ನಮಗಾಗಲಿ ಶ್ರೀಶಂಕರನಿಗಾಗಲಿ ಯಾವ ತರದ ಸಮಾಧಾನವೇ ಆಗಲಿ, ಸಂತೋಷವೇ ಆಗಲಿ ಹುಟ್ಟಲಾರದೆಂಬದು ಸತ್ಯವೇ ಸರಿ. ಆದರೆ ಅವುಗಳಿಂದ ಎರಡನೆಯವರಿಗೆ ಆನಂದವಾಗುತ್ತಿದ್ದರೆ ನಮಗೆ ಅದರಿಂದ ಆಗುವ ಹಾನಿಯಾದರೂ ಏನು?" ಎಂದನು.

ನಂದಿಯ ಸಯುಕ್ತಿಕ ವಿಚಾರವು ದಾಕ್ಷಾಯಿಣಿಗೆ ಸರಿಯಾಗಿ ತೋರಿತು. ಅವಳು ಕೂಡಲೆ ಕುಬೇರನನ್ನು ಸ್ಮರಿಸಿದಳು. ಕುಬೇರನು ಆದಿಮಾತೆಯ ಇಚ್ಛಾನುಸಾರವಾಗಿ ಅಮೌಲ್ಯ ರತ್ನಾಲಂಕಾರಗಳನ್ನೂ ಉಡಿಗೆತೊಡಿಗೆಗಳನ್ನೂ ತಂದುಕೊಟ್ಟನು. ದಾಕ್ಷಾಯಿಣಿಗೆ ನಂದಿಯ ವಿಚಾರದ ಮೇರೆಗೆ ಆ ವಸ್ತ್ರಾಲಂಕಾರಗಳನ್ನು ಧರಿಸುವ ಇಚ್ಛೆಯಿತ್ತು. ಆದರೆ ತನ್ನ ಪ್ರೀತಿಯ ತನ್ನ ಪತಿಯ ಪ್ರೀತಿಯ ಯೋಗಿನಿಯ ವೇಷವನ್ನು ತೆಗೆದೊಗೆಯಲಿಕ್ಕೆ ಮಾತ್ರ ಅವಳ ಮನಸ್ಸು ಒಪ್ಪಲಿಲ್ಲ. ಆದರಿಂದ ಅವಳು ತನ್ನ ಮೊದಲಿನ ಯೋಗಿನಿಯ ವೇಷವನ್ನು ಹಾಗೆಯೇ ಇಟ್ಟುಕೊಂಡು ಮೇಲೆ ವಸ್ತ್ರಾಲಂಕಾರಗಳನ್ನು ಧರಿಸಬೇಕೆಂದು ನಿರ್ಣಯಿಸಿದಳು. ನಾರುಬಟ್ಟೆಯ ಮೇಲೆ ಜರತಾರಿಯ ಸೀರೆಯನ್ನುಟ್ಟಳು. ರುದ್ರಾಕ್ಷಮಾಲೆಯು ಮರೆಯಾಗುವಂತೆ ರತ್ನದ ಹಾರಗಳನ್ನು ಧರಿಸಿದಳು. ವಿಭೂತಿಯ ಮೇಲೆ ಕುಂಕುಮವನ್ನಿಟ್ಟುಕೊಂಡಳು. ಬಿಲ್ವಪತ್ರ ಜವಾಕುಸುಮಗಳ ಮೇಲೆ ರತ್ನಕಿರೀಟವನ್ನು ಧರಿಸಿ

ದಳು. ಅಂತೂ ರಾಜರಾಜೇಶ್ವರಿಯ ವೇಷದಿಂದ ತನ್ನ ಶರೀರವನ್ನು, ತನ್ನ ನಿಜ ವೇಷವನ್ನು ಮರೆಮಾಡಿದಳು. ಅದನ್ನು ನೋಡಿ ನಂದಿಯು "ಆಹಾ! ಈಗ ಮಾತ್ರ ನಮ್ಮ ಅಮ್ಮನವರು ನಿಜವಾದ ದಕ್ಷಪುತ್ರಿಯ ಹಾಗೆ ಕಾಣಿಸುವರು. ದಕ್ಷನಿಗೆ ತಕ್ಕ ದಾಕ್ಷಾಯಿಣಿಯ ವೇಷವಿದು." ಎಂದನು.

ಈ ರೀತಿಯಾಗಿ ತನಗೆ ಸೇರದಿದ್ದರೂ ತಂದೆತಾಯಿಗಳ ಪ್ರೀತಿಗಾಗಿ ದಾಕ್ಷಾಯಿಣಿಯು ತರತರದ ಕೃತ್ರಿಮ ಅಲಂಕಾರಗಳಿಂದ ತನ್ನ ನಿಜವೇಷವನು ಮರೆಮಾಡಿಕೊಂಡು ದಕ್ಷಪುರಿಗೆ ಬಂದಳು. ಅವಳು ಮೊತ್ತಮೊದಲು ಅಂತಃ ಪುರದಲ್ಲಿದ್ದ ತಾಯಿಯ ಬಳಿಗೆ ಹೋದಳು. ಅಲ್ಲಿ ದಕ್ಷಪತ್ನಿಯು ಪ್ರೀತಿಯ ಮಗಳಾದ ಸತಿಯನ್ನು ನೆನೆನೆನೆದು ಕಣ್ಣೀರು ಸುರಿಸುತ್ತ ಮಲಗಿಕೊಂಡಿದ್ದಳು. ಅರಮನೆಯಲ್ಲಿ ಮಹಾ ಯಜ್ಞಸಮಾರಂಭವು ನಡೆಯುತ್ತಿದ್ದರೂ ಅವಳ ಮನೆ ದಲ್ಲಿ ಎಳ್ಳಷ್ಟಾದರೂ ಆನಂದವಿರಲಿಲ್ಲ. ಈಗ ಸತಿಯು ಬಂದಳೆಂಬ ಸುದ್ದಿಯು ಅವಳ ಕಿವಿಗೆ ಮುಟ್ಟಿದ ಕೂಡಲೆ ಅವಳು ತಟ್ಟನೆ ಎದ್ದು ಕುಳಿತು ಮಗೂ ಎಂದು ಕೈನೀಡುವಷ್ಟರಲ್ಲಿ ಸತಿಯು ಅವಳ ತೊಡೆಯ ಮೇಲೆ ಹೋಗಿ ಕುಳಿತಳು. ತಾಯಿಯು ಪರಮಾನಂದದಿಂದ:—"ಬಾರಮ್ಮಾ! ನಿನಗೆ ಆಮಂತ್ರಣವನ್ನು ಕಳು ಹಿಸಿದ್ದಿಲ್ಲ. ಅದಕ್ಕಾಗಿ ಯೋಚಿಸಬೇಡ. **ಅವರಿಗೆ** ಪರಿಪರಿಯಿಂದ ಹೇಳಿ ಕೊಂಡೆನು. ಆದರೂ ಕೇಳಲಿಲ್ಲ. ನೀನಾಗಿಯೇ ಬಂದದ್ದು ಬಹಳ ಒಳ್ಳೆಯ ದಾಯಿತು." ಎನ್ನುತ್ತ ಪ್ರೇಮಭರದಿಂದ ಪುನಃ ಪುನಃ ಮುದ್ದಿಟ್ಟುಕೊಂಡಳು. ಮಗಳ ವಸ್ತ್ರಾಲಂಕಾರಗಳನ್ನು ನೋಡಿ ಅವಳಿಗೆ ತುಂಬಾ ಆನಂದವಾಯಿತು.

"ಅಮ್ಮಾ! ನನಗೆ ಆಮಂತ್ರಣವೇಕೆಬೇಕು? ತಾಯಿಯನ್ನು ಕಾಣಲು ಬರುವ ಮಗಳಿಗೆ ಆಮಂತ್ರಣವೇಕೆ? ಅಮ್ಮಾ! ಇನ್ನೊಂದು ವಿಚಾರವಿದೆ. ಅಪ್ಪನು **ಅವರ** ಸೇಡುತೀರಿಸಿಕೊಳ್ಳಬೇಕೆಂದು ಇರುವನಂತೆ! ಒಮ್ಮೆ ಆತನನ್ನು ಕಂಡು ಮಾತಾಡಬೇಕು. ಯಜ್ಞಶಾಲೆಗೆ ಹೋಗುವೆನು." ಎಂದು ಸತಿಯು ನುಡಿದಳು. ತಾಯಿಯು "ಮಗೂ, ಕೈಲಾಸಗಿರಿಯಿಂದ ಬಂದಿರುವೆ, ದಣಿದಿರುವೆ. ತುಸು ಫಲಾಹಾರವನ್ನು ತೆಗೆದುಕೋ. ಯಾವದನ್ನೂ ಆ ಮೇಲೆ ನೋಡುವ." ಎಂದಳು. ಸತಿಯು ಸಮ್ಮತಿಸಿದಳು.

# ಪರಿಸಮಾಪ್ತಿ.



ದಾಕ್ಷಾಯಿಣಿಯು ತಾಯಿಯು ಕೊಟ್ಟ ಫಲಾಹಾರವನ್ನು ಸ್ವೀಕರಿಸಿ, " ಅಪ್ಪನನ್ನು ನೋಡಿ ಬರುವೆನು, ಅಮ್ಮಾ! " ಎಂದು ಯಜ್ಞಮಂಟಪಕ್ಕೆ ಹೊರಟಳು. ಅರಮನೆಯ ಎದುರಿಗೆ ನೀಲಧಾರೆಯು ದಂಡೆಗುಂಟ ವಿಶಾಲವಾದ ಯಜ್ಞಮಂಟಪವನ್ನು ರಚಿಸಿದ್ದರು. ದೇಶದೇಶಗಳಿಂದ ಬಂದ ಶ್ರೋತ್ರಿಯರು ಅಲ್ಲಿ ನೆರೆದಿದ್ದರು. ಸರ್ವ ಕಾರ್ಯಗಳಲ್ಲಿಯೂ ದಕ್ಷನಾದ ದಕ್ಷ ರಾಜನ ಐಶ್ವರ್ಯಕ್ಕೇನು ಕೊರತೆ? ಯಾವ ವ್ಯವಸ್ಥೆಯಲ್ಲಿಯೂ ನ್ಯೂನತೆಯಿರಲಿಲ್ಲ. ಮಂಟಪದ ಪೂರ್ವದ ಸಿಟ್ಟಿನಲ್ಲಿ ಯಜ್ಞವೇದಿಕೆಯನ್ನು ನಿರ್ಮಿಸಿದ್ದರು. ಋತ್ವಿಜರು ಆ ವೇದಿಕೆಯ ಸುತ್ತಲೂ ಮಂಡಲಾಕಾರವಾಗಿ ಕುಳಿತಿದ್ದರು. ಮಧ್ಯದಲ್ಲಿ ಪ್ರಜಾಪತಿ ದಕ್ಷನು ಕುಳಿತಿದ್ದನು. ಪವಿತ್ರವಾದ ಹೋಮಧೂಮವು ಸುತ್ತಲೂ ಪಸರಿಸಿತ್ತು. ಎಡೆಬಿಡದೆ ಬೀಳುವ ಆಹುತಿಗಳಿಂದ ಅಗ್ನಿನಾರಾಯಣನು ಪ್ರಜ್ವಲಿಸುತ್ತಿದ್ದನು. ಅಗ್ನಿಯ ಜಳದಿಂದ ದಕ್ಷನ ಮುಖವು ಕೆಂಪಡರಿತ್ತು. ಸತಿಯು ಬರುವದನ್ನು ಕಂಡು ಎಲ್ಲರೂ ಎದ್ದುನಿಂತು ಅವಳಿಗೆ ದಾರಿಯನ್ನು ಬಿಟ್ಟರು. ಸತಿಯು ಸಾವರಿಸಿಕೊಳ್ಳುತ್ತ ತಂದೆಯ ಬಳಿಗೆ ಬಂದು ನಮಸ್ಕಾರಮಾಡಿದಳು. ಒಂದು ಕ್ಷಣ ಋತ್ವಿಜರೆಲ್ಲರೂ ತಮ್ಮ ತಮ್ಮ ಕೆಲಸಗಳನ್ನು ನಿಲ್ಲಿಸಿದರು. ಆಗ ದಕ್ಷನು ಕಣ್ಣೊರಸಿಕೊಳ್ಳುತ್ತ ನೋಡುವಷ್ಟರಲ್ಲಿ ಎದುರಿಗೆ ಸತಿಯು ನಿಂತಿದ್ದಳು. ಅವಳ ರತ್ನಾಲಂಕಾರಭೂಷಿತವಾದ ರಾಣಿಯ ವೇಷವನ್ನು ನೋಡಿ ದಕ್ಷನಿಗೆ ತುಸು ಸಮಾಧಾನವಾಯಿತು. ಇದೀಗ ದಕ್ಷನ ಮಗಳಾದ ದಾಕ್ಷಾಯಿಣಿಗೆ ಒಪ್ಪುವ ವೇಷವು, ಎಂದು ಮನಸ್ಸಿನಲ್ಲಿ ಭಾವಿಸಿಕೊಂಡು ಅವನು " ಮಗೂ ಇಲ್ಲಿಗೇತಕ್ಕೆ ಬಂದುಬಿಟ್ಟೆ? " ದಕ್ಷನು " ಇಲ್ಲಿಗೆ " ಎಂಬ ಮಾತಿಗೆ " ಯಜ್ಞಮಂಟಪಕ್ಕೆ " ಎಂದು ಅರ್ಥಮಾಡಿಕೊಂಡಿದ್ದನು; ದಾಕ್ಷಾಯಿಣಿಯು " ದಕ್ಷಪುರಿಗೆ " ಎಂದು ಅರ್ಥಮಾಡಿಕೊಂಡು ತುಸು ಅಸಮಾಧಾನವನ್ನು ತಾಳಿ, " ಅಪ್ಪಾ! ಶಿವಹೀನಯಜ್ಞವು ಎಂದಾದರೂ ಮಂಗಳ

ಕರವಾಗಬಹುದೇ!" ಎಂದಳು. ಶಿವನ ಹೆಸರನ್ನು ಕೇಳಿದೊಡನೆಯೇ ದಕ್ಷನ ಮುಖದಿಂದ ಅಗ್ನಿಯು ಹೊರಬಿದ್ದಿತು. ಅವನು ಮನಸ್ಸಿನಲ್ಲಿ "ಇವಳು ಕೇವಲ ತನ್ನ ಸಲುವಾಗಿಯೇ ಬಂದವಳಲ್ಲ. ಮನೆಯ ಮಗಳು, ಬಂದುಹೋದರೂ ಹೋಗಲಿ, ಯಜ್ಞವನ್ನು ನೋಡಿ ಹೋಗಲು ಬಂದಿರಬಹುದು. ನಮಗೂ ಅಡ್ಡಿಯಿಲ್ಲ. ಅವಳು ಹೋಗಿ ಆ ತಿರುಕನ ಮುಂದೆ ಯಜ್ಞಸಮಾರಂಭವನ್ನು ವರ್ಣಿಸಿದರೆ ಅವನ ಹೊಟ್ಟೆಯಲ್ಲಿ ಉರಿಯು ಬಿದ್ದರೂ ಬೀಳಬಹುದು. ಎಂದು ಯೋಚಿಸಿದ್ದೆನು. ಆದರೆ ಆ ನೀಚನು ಹೆಂಡತಿಯನ್ನು ಸಂಧಾನಕ್ಕೆ ಕಳುಹಿಸಿರುವನು. ಇವಳು ಆ ಜೋಗಿಯ ಮಾತಿನಮೇಲೆ ಸಂಧಾನವನ್ನು ಸಾಧಿಸಲು ಬಂದಿರುವಳು. ಪ್ರಜಾಪತಿ ದಕ್ಷನು ಒಮ್ಮೆ ಮಾಡಿದ ಯೋಚನೆಯನ್ನು ಹಿಂದಿರುಗಿಸುವನೇ" ಎಂದು ಅಹಂಕಾರ ಅವಿಚಾರಗಳಿಂದ ಆಲೋಚಿಸಿ ಸತಿಗೆ;—"ನಿನ್ನನ್ನು ಯಾರು ಕರೆಯಿಸಿದರು? ಆ ದಿನ, ಆ ತಿರುಕನೊಡನೆ ಲಗ್ನವಾದ ದಿನವೇ ನಿನ್ನನ್ನು ನಮ್ಮ ಕುಲಕ್ಕೆ ಹೊರಗಿನವಳೆಂದು ತಿಳಿದಿರುವೆನು. ನೀನು ಬರಬಾರದೆಂದೇ ನಿನ್ನ ಕರೆಯುಕಳುಹಿಸಲಿಲ್ಲ." ಎಂದು ಮರ್ಮವನ್ನು ಭೇದಿಸಿ ಮಾತಾಡಿದನು.

ಸತಿಯು ಹುಟ್ಟಿದಂದಿನಿಂದಲೂ ಇಂಥ ಬಿರುನುಡಿಗಳನ್ನು ಕೇಳಿದವಳಲ್ಲ. ತಟ್ಟನೆ ಅವಳ ಕಣ್ಣುಗಳಲ್ಲಿ ನೀರು ಬಂದಿತು. "ಅಪ್ಪಾ, ಏಕೆ ಸುಮ್ಮನೆ ಬಿರುನುಡಿಯನ್ನಾಡುವೆ!" ಎಂದಳು. ಸತಿಯು ಸಮಾಧಾನದ ಈ ತರದ ಕರುಣಾಸ್ವರವನ್ನು ಕೇಳಿ ಎಲ್ಲರ ಹೃದಯವೂ ಕರಗಿತು. ಆದರೆ ದುರಹಂಕಾರಿಯೂ ಅವಿಚಾರಿಯೂ ಆದ ದಕ್ಷನು ಮಾತ್ರ ಮೊದಲಿನಂತೆ ಕಠೋರಸ್ವರದಿಂದ "ನಾಚಿಕೆಗೇಡಿ, ನೀನು ನನ್ನನ್ನು ಅಪ್ಪಾ ಎನ್ನಬಾರದು. ಅಭಿಮಾನಿಯಾದ ದಕ್ಷನ ಮಗಳಾಗಿದ್ದರೆ ನೀನು ಈ ರೀತಿಯಾಗಿ ಕರೆಯದೆ ಶ್ರಾದ್ಧದ ಮನೆಗೆ ಬರುವ ಬೆಕ್ಕಿನ ಹಾಗೆ ನಾಚಿಕೆಯನ್ನು ಬಿಟ್ಟು ಬರುತ್ತಿರಲಿಲ್ಲ. ನೀನು ಆ ತಿರುಕನ ಹೆಂಡತಿ, ಆ ಮಸಣದ ಪಿಶಾಚಿಗಳೊಡನೆ ಒಡನಾಡಿದವಳು. ಅದರಿಂದಲೇ ಹೀಗೆ ಮಾನಮರ್ಯಾದೆಗಳನ್ನು ತೊರೆದು ಬಂದಿರುವೆ. ನಿನ್ನ ನಡತೆಯು ದಕ್ಷಪುತ್ರಿಯಾದ ದಾಕ್ಷಾಯಿಣಿಗೆ ಒಪ್ಪತಕ್ಕದ್ದಲ್ಲ. ಆ ನಿರ್ಲಜ್ಜ ಮಸಣದ ತಿರುಕನಿಗೇ ಒಪ್ಪುವಂಥದು." ಎಂದನು.

**ಸತಿ:**—ಅಪ್ಪಾ, ಕಾರಣವಿಲ್ಲದೆ ಅವರನ್ನು ನಿರ್ಲಜ್ಜನೆನ್ನುವಿಯೇಕೆ? ಬಯ್ಯಬೇಡ.

**ದಕ್ಷ:**— ನಿರ್ಲಜ್ಜನೆಂದರೆ ಅವನಿಗೆ ಬಯ್ದಂತಾಗುವದಿಲ್ಲ. ಇದಕ್ಕೂ ಕೀಳುಶಬ್ದಗಳು ಬೇಕು. ದಿಗಂಬರನಾದವನಿಗೆ ಲಜ್ಜೆಯೆಲ್ಲಿಯದು? ಮನೆ ಯೇನು? ಮಸಣವೇನು? ಗಂಧವೇನು? ಬೂದಿಯೇನು? ಅಮೃತವೇನು? ವಿಷವೇನು? ಇಂಥವನಿಗೆ ನಿರ್ಲಜ್ಜನೆನ್ನಬೇಕೋ, ಉನ್ಮತ್ತನೆನ್ನಬೇಕೋ, ಛೀ, ಮೋರೆಯು ತೋರಬೇಡ.

**ಸತಿ:**—'ನಿರ್ಲಜ್ಜರಾಗಿರಲಿ, ಉನ್ಮತ್ತರಾಗಿರಲಿ, ಅವರೇ ನನ್ನ ಜೀವನ ಸರ್ವಸ್ವ. ನಿನ್ನ ಬಾಯಿಯಿಂದ ನಾನು ಅವರ ನಿಂದೆಯನ್ನು ಕೇಳಬೇಕಾಯಿ ತಲ್ಲವೇ?" ಸಿಟ್ಟಿನ ಭರದಿಂದ ದಕ್ಷನ ಶರೀರವೆಲ್ಲಾ ಗಡಗಡ ನಡುಗುತ್ತಿತ್ತು. ಬಾಯಿಯಿಂದ ಮಾತು ಹೊರಡದು. ನೆರೆದವರೆಲ್ಲರೂ ತಟಸ್ಥರಾಗಿ ಕುಳಿತಿದ್ದರು. ಮುಂದಾಗುವ ಅಶುಭ ಪರಿಣಾಮವನ್ನು ನೆನೆನೆನೆದು ಅವರೆಲ್ಲರೂ ಮರಮರನೆ ಮನದಲ್ಲಿಯೇ ಮರಗುತ್ತಿದ್ದರು.

**ಸತಿಯು** ಪುನಃ:—"ಅಪ್ಪಾ, ಪ್ರಸನ್ನವಾಗಬೇಕು. ಕ್ಷಮಿಸು. ನಮ್ಮದೇನಾದರೂ ಅಪರಾಧವಾಗಿದ್ದರೆ ಅದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಹೇಳಕೂಡದೆ?" ಎಂದಳು.

ವಿನಾಶಕಾಲಕ್ಕೆ ವಿಪರೀತಬುದ್ಧಿ. ದಕ್ಷನಿಗೆ ವಿನಾಶಕಾಲವೊದಗಿದೆಯೆಂದು ಮೊದಲೊಮ್ಮೆ ಹೇಳಿರುವೆವು. ಸತಿಯ ಈ ತರದ ಮಾತುಗಳಿಂದ ದಕ್ಷನು ಸಮಾಧಾನಹೊಂದಬೇಕಾಗಿತ್ತು. ಆದರೆ ಆತನ ಅಭಿಮಾನವು ಇನ್ನಷ್ಟು ಉತ್ತೇಜಿತವಾಯಿತು. ಶಿವನು ಸಂಧಾನಕ್ಕಾಗಿ ಇವಳನ್ನು ಕಳುಹಿಸಿದ್ದೇ ನಿಜವೆಂದು ಅವನು ಭಾವಿಸಿಕೊಂಡನು. ಇಲ್ಲವಾದರೆ ಅಭಿಮಾನಿನಿಯಾದ ದಕ್ಷಪುತ್ರಿಯು ಈ ರೀತಿಯಾಗಿ ಕ್ಷಮೆಯನ್ನು ಬೇಡುವಳೇ, ಎಂದು ಅವನು ತಿಳಿದುಕೊಂಡನು. ಆಗಲವನು ದುರಹಂಕಾರದಿಂದ—"ಪ್ರಾಯಶ್ಚಿತ್ತವೇನು? ಅದಕ್ಕೆ ದೇಹಾಂತಪ್ರಾಯಶ್ಚಿತ್ತವೇ ಸರಿಯಾದುದು. ನೀನು ಎಂದು ಈ ದೇಹವನ್ನು ಬಿಡುವೆಯೋ ಅಂದೇ ಆ ಅಧಮನ ಸಂಬಂಧವು ಕಡಿದುಹೋಗುವದು. ಆ ದುರಾಚಾರಿಯ ಸಂಬಂಧವು ಕಡಿದ ಹೊರತು ನನ್ನ ಸಿಟ್ಟು ಇಳಿಯದು."

ಇನ್ನು ಸತಿಯಿಂದ ಪತಿನಿಂದೆಯನ್ನು ಸಹಿಸುವದಾಗಲಿಲ್ಲ. ಅವಳು ಪತಿನಿಂದೆಯನ್ನು ಕೇಳಿ ಅಪವಿತ್ರವಾದ ಕಿವಿಗಳಲ್ಲಿ ಬೆರಳಿಟ್ಟುಕೊಂಡು ಶಿವ! ಶಿವ!

ಎನ್ನುತ್ತ ದೊಪ್ಪನೆ ನೆಲದ ಮೇಲೆ ಕುಳಿತು ಯೋಗಾಸನವನ್ನು ಹಾಕಿ ಕಣ್ಮುಚ್ಚಿದಳು. ಕೆಲಕಾಲ ಅವಳ ಶರೀರವು ಸ್ತಬ್ಧವಾಗಿತ್ತು. ನೆರೆದವರೆಲ್ಲ ಚಕಿತರಾಗಿ ಚಿತ್ರದ ಗೊಂಬೆಗಳಂತೆ ನೋಡುತ್ತ ನಿಂತಿದ್ದರು. ನೋಡನೋಡುತ್ತ ಸತಿಯ ದೇಹದಿಂದ ಅಪೂರ್ವವಾದೊಂದು ದಿವ್ಯತೇಜಸ್ಸು ಹೊರಚಲ್ಲಿತು. ಅದರ ತೇಜದಿಂದ ಯಜ್ಞಾಗ್ನಿಯ ತೇಜವೂ ಮಲಿನವಾಯಿತು. ಈ ಜ್ಯೋತಿಯು ಯಜ್ಞಕುಂಡದ ಅಗ್ನಿಯೊಡನೆ ಮಿಶ್ರವಾಗಿ ಆಕಾಶದಲ್ಲಿ ಅಡಗಿ ಹೋಯಿತು. ಕ್ಷಣದಲ್ಲಿ ಸತಿಯ ದೇಹವು ಮಣ್ಣಬೊಂಬೆಯಂತೆ ನೆಲಕ್ಕೆ ಉರುಳಿತು.

ಪರಕ್ಷಣದಲ್ಲಿಯೇ ಸತಿಯ ಸಂಗಡ ದಕ್ಷಪುರಿಗೆ ಬಂದಿದ್ದ ನಂದಿಯು ಈ ಎಲ್ಲ ವಾರ್ತೆಯನ್ನು ಕೈಲಾಸಪತಿಯ ಬಳಿಗೆ ಹೋಗಿ ಅರಿಕೆ ಮಾಡಿಕೊಂಡನು. ಕೂಡಲೇ ಕೈಲಾಸಪತಿಯೂ ಆತನ ಗಣದವರೂ ಓಡುತ್ತ ದಕ್ಷಪುರಿಗೆ ಬಂದರು. ಕ್ಷಣದಲ್ಲಿ ಮಹಾ ವೈಭವಯುಕ್ತವಾದ ದಕ್ಷರಾಜನ ಯಜ್ಞಶಾಲೆಯು ಮಸಣದಂತಾಗಿ ಹೋಯಿತು. ಭೂತಗಣವು ದಕ್ಷರಾಜನನ್ನೂ ಆತನ ಪರಿವಾರದವರನ್ನೂ ಕಡಿದು ಚಲ್ಲಿತು. ಶಂಕರನು ಸತಿಯ ಮೃತದೇಹವನ್ನು ಎತ್ತಿಕೊಂಡು ತಾಂಡವ ನೃತ್ಯವನ್ನು ಆರಂಭಿಸಿದನು, ಅಷ್ಟರಲ್ಲಿ ಪತಿವ್ರತೆಯಾದ ದಕ್ಷಪತ್ನಿಯು ಬಂದು ಶಂಕರನ ಪಾದಗಳಿಗೆರಗಿ ಕ್ಷಮೆಯನ್ನು ಬೇಡಿ ತನ್ನ ಸೌಭಾಗ್ಯವನ್ನು ಕಾಪಾಡಬೇಕೆಂದು ಬೇಡಿಕೊಂಡಳು. ಆಗ ಕರುಣಾಳುವಾದ ಶಂಕರನು ಅವಳ ಪ್ರಾರ್ಥನೆಯನ್ನು ಮನ್ನಿಸಿ ದಕ್ಷನು ಪುನರ್ಜೀವಿತನಾಗಲೆಂದು ಆಶೀರ್ವದಿಸಿದನು. ದಕ್ಷನು ಜೀವಿತನಾಗಬಹುದೆಂದು ನಿರ್ಣಯವಾಯಿತು. ಆದರೆ ಆತನ ರುಂಡವನ್ನು ಭೂತಗಣವು ಎಲ್ಲಿಯೋ ಚಲ್ಲಿಬಿಟ್ಟಿತ್ತು. ಅದು ಎಷ್ಟು ಹುಡುಕಿದರೂ ಸಿಕ್ಕಲಿಲ್ಲ. ನೆರೆದವರಲ್ಲೊಬ್ಬನು ಕಡೆಗೊಂದು ಉಪಾಯವನ್ನು ಯೋಚಿಸಿದನು. ಸಮೀಪದಲ್ಲಿ ಬಿದ್ದಿರುವ ಒಂದು ಆಡಿನ ತಲೆಯನ್ನು ತಂದು ದಕ್ಷನ ಮುಂಡದ ಮೇಲಿಟ್ಟನು. ದಕ್ಷನು ಶ್ರೀಶಂಕರನ ಪ್ರಸಾದದಿಂದ ಪುನರ್ಜೀವಿತನಾದನು. ದಕ್ಷಪತ್ನಿಯ ಸೌಭಾಗ್ಯವು ರಕ್ಷಿಸಲ್ಪಟ್ಟಿತು. ಅವಳು ಪುನಃ ಸುಮಂಗಲೆಯಾದಳು. ಈಶ್ವರ ಕೃಪಾಪ್ರಸಾದವಿದ್ದರೆ, ಸರ್ವರ ಇಷ್ಟಾರ್ಥಗಳೂ ನೆರವೇರುವದರಲ್ಲಿ ಸಂದೇಹವಿಲ್ಲ.

नीतिर्नोऽः भुजंग पुंगव विषात्प्रीतिर्न चन्द्रामृता- ।
न्ना शौचं हि कपाल दाम लुलनाच्छौचं न गंगाजलात् ।
नोद्वेगश्चितिभस्मना नच सुखं गौरी स्तनालिंगना ।
दात्मारामतया हिताहित समः स्वस्थो हरः पातुवः ॥

---

## ಹೃದಯನಿವೇದನೆ.

ಜಗನ್ನಿಯಂತನಾದ ಭಗವಂತನ ಕೃಪೆಯಿಂದಲೂ ಕರ್ನಾಟಕ ಸಮಾ ಬಂಧುಗಳ ಸಹಾಯ ಸಂಪತ್ತಿನ ಬಲದಿಂದಲೂ ಈ ದ್ವಿತೀಯ ಮುದ್ರಣ ಕಾರ್ಯವನ್ನು ಕೈಕೊಳ್ಳುವ ಸಾಹಸ ಮಾಡಿದೆನು. ಮೈಸೂರು ಸೀಮೆಯ ಕನ್ನಡಕ್ಕೆ ಸರಿಹೊಂದುವಂತೆ ಅಲ್ಲಲ್ಲಿಗೆ ಕೆಲವು ಮಾರ್ಪಾಡುಗಳನ್ನು ಮಾಡಿಕೊಟ್ಟ ಮಹನೀಯರಾದ **ಶ್ರೀ. ಬಿ. ವೆಂಕಟ ನಾರಾಯಣಪ್ಪನವರು,** ಎಮ್. ಏ. ಅವರ ಉಪಕಾರವನ್ನು ಸದಾಸ್ಮರಿಸುವೆನು. ಮತ್ತು ಅಖಿಲ ಜಗದ್ವ್ಯಾಪಿಯಾದ ಶ್ರೀಹರಿಯನ್ನು,

**ಹರಿಯೆ ನಿನ್ನೊಳು ಭಕ್ತಿ ಮುಕ್ತಿಗೆ।**
**ಸರಳ ಮಾರ್ಗವಿದೆಂಬುದರಿಯದೆ।**
**ತಿರುತಿರುಗಿ ಮಾಯಾಪ್ರಪಂಚದಿ ಸುತ್ತಿ ಬೇಸತ್ತೆ ॥**
**ಪರಮ ಭಕ್ತಿಯೊಳೀಗ ನಿನ್ನಯ।**
**ಚರಣ ತಲದಲಿ ಬಿದ್ದು ಬೇಡುವೆ।**
**ಪರಿಹರಿಸೊ ನರಜನ್ಮವನು ಕೊಂಡೀ ಸುಮಾಂಜಲಿಯ ॥**

ಹೀಗೆಂದು ಪ್ರಾರ್ಥಿಸಿ ಪ್ರಸ್ತುತಕ್ಕೆ ವಿರಮಿಸುತ್ತೇನೆ.

ಶ್ರೀಸರಸ್ವತೀ ಮಂದಿರಮ್, **ವಿಜಾಪುರ.**
ವರ್ಷಪ್ರತಿಪದೆ ಶಕೆ, ೧೮೪೩.

ವಿದ್ವಜ್ಜನ ವಿಧೇಯ
**ನಾರಾಯಣ**

---